# ಶೂದ್ರ

ಬೆಲೆ : 1-50

ನೋಡುವ ಕಣ್ಣುಗಳಿಗೆ ನಾನೇನಾಗಿರಬಹುದು ?



ಈ ಸಂಚಿಕೆಯಲ್ಲಿ

ಗಿರೀಶ್ ಕಾರ್ನಾಡ್—ಅರುಣ ವಾಸುದೇವ್—ರಾಜಾರಾಮ್ ಮೋಹನ್
ರಾಯ್—ಮುಕ್ತಾಯಕ್ಕ—ಯಾದವಿ—ಎಚ್ ಎಸ್ ಶಿವಪ್ರಕಾಶ್
ವೀಚಿ—ಎಲ್ಸಿ. ನಾಗರಾಜು—ಚಂದ್ರಶೇಖರ ಪಾಟೀಲ—ಮಧುಮತಿ
ಕೆ. ಮರುಳಸಿದ್ದಪ್ಪ—ಶಂಕರಮೊಕಾಶಿ ಪುಣೇಕರ—ಡಿ. ಎಸ್. ಶ್ರೀಕಂಠ
ಮೂರ್ತಿ—ಚಿ. ಸು. ಕೃಷ್ಣಸೆಟ್ಟಿ—ನರಹಳ್ಳಿ ಬಾಲಸುಬ್ರಹ್ಮಣ್ಯ
ಕನಸಿಗೊಂದು ಕಣ್ಣು—ಇಲ್ಲದವರು

ನನ್ನೆಲ್ಲರ ಅರ್ಥಪೂರ್ಣತೆಗಾಗಿ ಶೂದ್ರ ತಿಂಗಳ ಪತ್ರಿಕೆ

ಸಂಚಿಕೆ : 4 ಫೆಬ್ರವರಿ 1984 ಸಂಪುಟ : 9

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ–ಶಶಿಕಲಾ ವಸ್ತ್ರದ
ಆನಂದಮೂರ್ತಿ

ಮುಖಪುಟ : ರಾಮಕಿಂಕರ್ (ಪ್ರಸಿದ್ಧ ಬಂಗಾಳಿ ಕಲಾವಿದ)
ಹಿಂಬದಿ ಚಿತ್ರ : ಹೆಬ್ಬಾರ್ (ಇವರ ಪರಿಚಯ ಅನಗತ್ಯ)

ಶೂದ್ರ ಹನ್ನೊಂದನೆಯ ವರ್ಷದಲ್ಲಿ ನಿಮ್ಮನ್ನು ಕೇಳಿಕೊಳ್ಳುವುದು ದಯವಿಟ್ಟು ಚಂದಾ ಕಳಿಸಿ ಎಂದು. ಶೂದ್ರ ಬೇಡವಾದರೆ ಪತ್ರ ಬರೆಯಿರಿ. ಬರದಿದ್ದರೂ ಪತ್ರ ಬರೆಯಿರಿ. ಪ್ರತಿವರ್ಷ ಚಂದಾ ಕಳಿಸಲು ನಿಮಗೆ ಬೋರ್ ಆದರೆ ಆಜೀವಚಂದಾದಾರರಾಗಿ. ನಿಮ್ಮ ಗೆಳೆಯರಿಗೆ ಶೂದ್ರದ ಸದಸ್ಯರಾಗಲು ತಿಳಿಸಿ.

ಆಜೀವ ಚಂದಾ : 200 ರೂ : (ನಾಲ್ಕು ಕಂತುಗಳಲ್ಲಿ)
ವಾರ್ಷಿಕ ಚಂದಾ : 18 ರೂ

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು–560 029

# ಸಾಹಿತ್ಯ ರಂಗಭೂಮಿ ಮತ್ತು ಚಲನಚಿತ್ರ

—ಗಿರೀಶ್ ಕಾರ್ನಾಡ್

ಪ್ರಶ್ನೆ : ನಿಮ್ಮ ವ್ಯಾಸಂಗ, ಹಿನ್ನೆಲೆ, ಚಲನಚಿತ್ರವನ್ನು ಪ್ರವೇಶಿಸಿದ ಬಗೆ...

ಗಿರೀಶ್ ಕಾರ್ನಾಡ್ :

ಅದೊಂದು ವಿಚಿತ್ರ ಸಂಗತಿ. ನನಗೆ ಚಲನಚಿತ್ರದಲ್ಲಿ ಆಸಕ್ತಿಯೇ ಇರಲಿಲ್ಲ. ನಾನು ಆಕ್ಸ್‌ಫರ್ಡ್‌ನಲ್ಲಿದ್ದಾಗ ಆಂಟೋನಿಯೋನಿಯ ಮೊದಲ ಚಿತ್ರಗಳು ಬಂದವು. ಆ ಸಂದರ್ಭದಲ್ಲಿ ಫೇಲಿನಿ ಬೆಳಕಿಗೆ ಬಂದಿದ್ದ. ನಾನು ಆ ಚಿತ್ರಗಳನ್ನು ನೋಡಲು ನಿರಾಕರಿಸಿದ್ದೆ. ಆಕ್ಸ್‌ಫರ್ಡ್ ವಿದ್ಯಾರ್ಥಿಯಾಗಿದ್ದೆ ಎಂಬ ಕಾರಣಕ್ಕಾಗಿ ಒಂದು ಬಗೆಯ ಬೋರಲು ಮೂರ್ಖತೆ ನನ್ನಲ್ಲಿ ಮನೆ ಮಾಡಿತ್ತು. ಚಲನಚಿತ್ರದಲ್ಲಿ ಆಸಕ್ತಿಯಿಲ್ಲದ ನಾನು ಭಾರತಕ್ಕೆ ವಾಪಸಾದಾಗ, 'ಸಂಸ್ಕಾರ'ದ ಹಸ್ತಪ್ರತಿಯನ್ನು ಓದಿದೆ. ನಿಮಗೆ ಗೊತ್ತಿರುವ ಹಾಗೆ ನಾನು ನಾಟಕಕಾರ. ಉದ್ವೇಗಗೊಂಡೆ. ಹಸ್ತಪ್ರತಿ, ಘಟನೆ ಗಳನ್ನು ಕಣ್ಣಿಗೆ ಕಟ್ಟಿಸುವಂತಿತ್ತು, ಅಷ್ಟೊಂದು ಪರಿಣಾಮಕಾರಿ. ಆ ಕೂಡಲೆ ನಾನೇ ಆ ಕಾದಂಬರಿಯನ್ನು ಬರೆದಿದ್ದರೆ ಅನ್ನಿಸಿತು. ಆದರೆ ನಾನು ಅದನ್ನು ಬರೆಯಲ್ಲು ಆಗದೇ ಇದ್ದುದರಿಂದ ನಾನು ಮಾಡಬಹುದಾಗಿದ್ದ ಒಂದೇ ಕೆಲಸವೆಂದರೆ ಅದನು ಚಿತ್ರೀಕರಿಸುವುದು. ಪುಸ್ತಕವನ್ನು ವಶಪಡಿಸಿಕೊಳ್ಳುವಂತಹ ಒಂದು ಪ್ರಯತ್ನ ಅದು. ಈಗಂತೂ ಅದು ಕನ್ನಡದಲ್ಲಿ ಹೆಸರುವಾಸಿ ಪುಸ್ತಕ.

---

'ಇಂಡಿಯನ್ ಸಿನಿಮಾ ಸೂಪರ್ ಬಜಾರ್' ಎಂಬ ಪುಸ್ತಕದಲ್ಲಿ ಅರುಣಾ ವಾಸುದೇವನ್ ಮತ್ತು ಫಿಲಿಪ್ ಲೆಂಗ್ಲೆಟ್ ಅವರು ಸಂದರ್ಶಿ ಸಿರುವ ಗಿರೀಶ್ ಕಾರ್ನಾಡ್‌ರವರ ಸಂದರ್ಶನ ಶೂದ್ರದ ಓದುಗರಿಗೆ ಉಪಯುಕ್ತ ಎಂಬ ಕಾರಣಕ್ಕಾಗಿ ಕೊಡುತ್ತಿದ್ದೇವೆ. ಇದನ್ನು ಸಂಗ್ರಹಿಸಿ ಅನುವಾದಿಸಿಕೊಟ್ಟವರು ಶ್ರೀಮತಿ ಬಿ. ಎಸ್. ವೆಂಕಟಲಕ್ಷ್ಮಿಯವರು. ಸಂ.

ಆಮೇಲೆ ನಾನು ನನ್ನ ಪರಿಚಿತರೊಡನೆ ಚರ್ಚಿಸ ತೊಡಗಿದೆ. ಇದೊಂದು ಉತ್ತಮ ಚಿತ್ರವಾಗಬಹುದು. ಆದರೆ ಯಾರು ಆಸಕ್ತಿ ತೋರಲಿಲ್ಲ. ಕಾರಣ ಅಂದಿನ ದಿನಗಳಲ್ಲಿ ಸಣ್ಣ ಬಜೆಟ್ ಚಿತ್ರಗಳು ಜನಪ್ರಿಯವಾಗಿರಲಿಲ್ಲ. ಯಾರೂ ಅದನ್ನು ತಯಾರಿಸುವ ಹೊಣೆಯನ್ನು ಹೊತ್ತುಕೊಳ್ಳಲಿಲ್ಲ. ಆ ಸಂದರ್ಭದಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಪ್ರಕಾಶನದಲ್ಲಿ ಕೆಲಸ ಮಾಡುತ್ತಿದ್ದುದರಿಂದ ಮದ್ರಾಸಿನಲ್ಲಿದ್ದೆ. ಬಿಡುವಿನ ವೇಳೆಯಲ್ಲಿ ನಾನು ಮದ್ರಾಸ್ ಪ್ಲೇಯರ್ಸ್ ಎಂಬ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದೆ. ಅದರಲ್ಲಿ ಅದಕ್ಕೂ ಮೊದಲು ತೆಲುಗು ಚಿತ್ರಗಳನ್ನು ತಯಾರಿಸಿ ಸೋತು ಹಣ ಕಳೆದುಕೊಂಡಿದ್ದ ಪಟ್ಟಾಭಿರಾಮರೆಡ್ಡಿ ಇದ್ದರು. ಈ ಚಿತ್ರವನ್ನು ಕಡಿಮೆ ಖರ್ಚಿನಲ್ಲಿ ಮಾಡಬಹುದೆಂದರು. ನಾನು ಒಪ್ಪಿಕೊಂಡೆ. ಚಿತ್ರಕಥೆಯನ್ನು ಬರೆಯಲು ನಿರ್ಧರಿಸಿದೆ. ಅನಂತರ ಚಿತ್ರಗಳನ್ನು ನೋಡಲು ಪ್ರಾರಂಭಿಸಿದೆ. ಅವನ್ನು ಅಧ್ಯಯನ ಮಾಡತೊಡಗಿದೆ. ಹುಚ್ಚು ಹಿಡಿದವನಂತೆ... ಐಸನ್‌ಟೀನ್‌ನಿಂದ ಹಿಡಿದು... ಸಿಕ್ಕಪುಸ್ತಕಗಳನ್ನೆಲ್ಲ ಓದಿಕೊಂಡೆ. ಮುಂದಿನ ಎರಡೂವರೆ ವರ್ಷಗಳ ಕಾಲ ನಾನು ಅಧ್ಯಯನದ ದಿಶೆಯಲ್ಲಿ ಗುಲಾಮನಂತೆ ದುಡಿದೆ. ನಾನು ಸಾಕಷ್ಟು ಹಣ ಸಂಗ್ರಹಿಸುವ ಹೊತ್ತಿಗೆ ಸುಮಾರು ಎರಡು ವರ್ಷಗಳು ಕಳೆದಿತ್ತು. ಸುಮಾರು 95,000 ರೂ ಖರ್ಚಾಯಿತು. ಅಷ್ಟೇನೂ ಹೆಚ್ಚಲ್ಲ. ಆದರೆ ಆ ದಿನಗಳಲ್ಲಿ ಅದು ದೊಡ್ಡ ಮೊತ್ತ.

ಪ್ರಶ್ನೆ : ನೀವು ಅದರಲ್ಲಿ ಪಾತ್ರ ವಹಿಸಿದ್ದಿರಿ. ಅದಕ್ಕೆ ಮೊದಲು ನೀವು ಚಿತ್ರದಲ್ಲಿ ನಟಿಸಿರಲಿಲ್ಲ.

ಉತ್ತರ : ಚಲನಚಿತ್ರದಲ್ಲಿ ಎಂದೂ ಪಾತ್ರ ಮಾಡಿರಲಿಲ್ಲ. ರಂಗದ ಮೇಲೆ ಮಾತ್ರ. ಇಲ್ಲಿ ಪಾತ್ರ ವಹಿಸಿದ್ದಕ್ಕೆ ಕಾರಣ ನಮಗೆ ಹಣಕಾಸಿನ ಮಿತಿಯಿದ್ದುದರಿಂದ ನಾನೇ ನಟಿಸಬೇಕಾಗಿತ್ತು. ನಮ್ಮ ಬಜೆಟ್ ಕಡಿಮೆ. ಬೆಂಗಳೂರಿನಿಂದ ನಟರನ್ನು, ಬ್ರಾಹ್ಮಣರನ್ನು ಕರೆಸಲು ಪ್ರಯತ್ನಪಟ್ಟೆವು. ಚಿತ್ರಕಥೆಯಲ್ಲಿ ಬ್ರಾಹ್ಮಣರ ಅನೇಕ ಪಾತ್ರಗಳಿವೆ. ಆ ಜನ, ಬ್ರಾಹ್ಮಣರು, ಬೆಂಗಳೂರಿಂದ ಬಂದವರು. ಆ ದಿವಸಗಳಲ್ಲಿ ಮಧ್ಯಮ ವರ್ಗದ ಮಹಿಳೆಯರು ಚಲನಚಿತ್ರಗಳಲ್ಲಿ ನಟಿಸುವುದನ್ನು 'ಕೀಳು' ಎಂದು ಭಾವಿಸಲಾಗಿತ್ತು. ಹೆಂಗಸರು ಹೊರಬರಲು ನಿರಾಕರಿಸುತ್ತಿದ್ದರು. ಒಪ್ಪಿದವರು ಚಿತ್ರದ ಕಲಾ ನಿರ್ದೇಶಕ ವಾಸುದೇವ್ ಅವರ ಸೋದರಿ. ಇನ್ನೊಬ್ಬರು ಮದ್ರಾಸ್ ಪ್ಲೆಯರ್ಸ್‌ನ ಸ್ನೇಹಲತಾ. ಹೀಗಾಗಿ ಚಿತ್ರದಲ್ಲಿರುವವರೆಲ್ಲ ಮದ್ರಾಸ್ ಪ್ಲೇಯರ್ಸ್‌ನ ಹೆಂಗಸರು, ಮುಖ್ಯವಾಗಿ ಅದರ ಸದಸ್ಯರು. ನಾನು ನಾಯಕನ ಪಾತ್ರವನ್ನು ವಹಿಸಲು ಒಪ್ಪಲಿಲ್ಲ. ಏಕೆಂದರೆ ನಾನಾಗಲೇ ಹೇಳಿದ ಹಾಗೆ ನಾನು ಚಿತ್ರ ಮಾಡುವುದನ್ನು ಕಲಿಯಬೇಕಾಗಿತ್ತು. ನಾನು ಸಹಾಯಕ ನಿರ್ದೇಶಕನಾಗಬಹುದಾಗಿತ್ತು. ಆದರೆ

ಪಟ್ಟಾಭಿರಾಮರೆಡ್ಡಿ, 'ನಿನಗೆ ಕನ್ನಡ ಗೊತ್ತಿದೆ, ಚಿತ್ರಕಥೆ ಗೊತ್ತು. ಕಾದಂಬರಿ ಗೊತ್ತು, ಹಿನ್ನೆಲೆ ಗೊತ್ತು, ಆದ್ದರಿಂದ ನೀನೇ ಪಾತ್ರ ವಹಿಸು' ಎಂದರು. ಹೀಗೆ ನಾನು ಚಲನಚಿತ್ರ ನಟನಾದೆ.

ಪ್ರಶ್ನೆ : ಆದರೆ ಆಕ್ಸ್‌ಫರ್ಡ್‌ಗೆ ಮೊದಲು, ನೀವು ಚಿತ್ರಗಳನ್ನು ನೋಡೇ ಇರಲಿಲ್ಲವೇ ? ಭಾರತದಲ್ಲಿದ್ದಾಗ ?

ಉತ್ತರ : ಸತ್ಯಜಿತ್‌ರೇ ಅವರ ಚಿತ್ರಗಳನ್ನು ಯಾರಾದರೂ ನೋಡೇ ಇರುತ್ತಾರೆ. ಆದರೆ ನಾನು ವ್ಯಾಪಾರಿ ಚಿತ್ರಗಳನ್ನು ನೋಡಿರಲಿಲ್ಲ. ಹಾಲಿವುಡ್ ಚಿತ್ರಗಳನ್ನು ನೋಡಿದ್ದೆ. ಸಣ್ಣವನಾಗಿದ್ದಾಗ, ಕಾಲೇಜಿನಲ್ಲಿದ್ದಾಗ, ಮಧ್ಯಮ ವರ್ಗದ ಯಾವುದೇ ವ್ಯಕ್ತಿಗೆ ಚಲನಚಿತ್ರ ನೋಡುವುದು ಅಸಾಧ್ಯವಾಗಿತ್ತು. ನಿಮಗೆ ಗೊತ್ತಿದೆ, ಕಳೆದ ಹತ್ತು ವರ್ಷಗಳಿಂದೀಚೆಗೆ ಮಾತ್ರ ಈ ಜನರಿಗೆ ಅವನ್ನು ನೋಡುವ ಅವಕಾಶ ಒದಗಿದೆ. ನಾನು ಕಾಲೇಜಿನಲ್ಲಿದ್ದಾಗ ಅದು ಬೇರೆಯೇ ಜಗತ್ತಾಗಿತ್ತು. ನಿಜವಾದ ಚಿತ್ರಗಳೆಂದರೆ ವ್ಯಾಪಾರಿ ಚಿತ್ರಗಳಾಗಿದ್ದು ನಾವು ಅವನ್ನು ಆಡಿಕೊಳ್ಳುತ್ತಿದ್ದೆವು.

ಪ್ರಶ್ನೆ : ನೀವು ಕಾಲೇಜನ್ನೆಲ್ಲಿ ಓದಿದಿರಿ ?

ಉತ್ತರ : ಧಾರವಾಡ. ಅಲ್ಲಿ ಕನ್ನಡ ಚಿತ್ರೋದ್ಯಮವಿರಲಿಲ್ಲ.

ಪ್ರಶ್ನೆ : ಯಾವ ಬಗೆಯ ಹಾಲಿವುಡ್ ಚಿತ್ರಗಳನ್ನು ನೋಡಿದ್ದಿರಿ ?

ಉತ್ತರ : ಸಿಕ್ಕ ಸಿಕ್ಕ ಚಿತ್ರಗಳನ್ನೆಲ್ಲ. ಆ ದಿನಗಳಲ್ಲಿ ಜನರಿಗೆ ಇಂಗ್ಲಿಷ್ ಗೊತ್ತಿದ್ದರಿಂದ ಅವು ಹೆಚ್ಚು ಪ್ರದರ್ಶಿತಗೊಳ್ಳುತ್ತಿದ್ದವು.

ಪ್ರಶ್ನೆ : ನಿಮಗೆ ಯಾವ ಚಿತ್ರವೂ ನೆನಪಿಲ್ಲವೇ ?

ಉತ್ತರ : ಇಲ್ಲ. ವೈಯಕ್ತಿಕವಾಗಿ ನನಗೆ ಚಿತ್ರಗಳಲ್ಲಿ ಆಸಕ್ತಿಯಿರಲಿಲ್ಲ. ಸತ್ಯಜಿತ್‌ರೇ ಅವರ ಚಿತ್ರಗಳಲ್ಲಿಯೂ ಸಹ. ಅವರು ತಮ್ಮ ಮೊದಲ ಚಿತ್ರದ ಮೂಲಕವೇ ಎಷ್ಟು ಯಶಸ್ಸನ್ನು ಗಳಿಸಿದ್ದರೆಂದರೆ ಅವರನ್ನು ಯಾರೂ ಅನುಕರಿಸುವುದು ಸಾಧ್ಯವಾಗಲಿಲ್ಲ. 'ಪಥರ್ ಪಾಂಚೇಲಿ' ಬಂದದ್ದು 1955ರಲ್ಲಿ. ಆದರೆ ಸಣ್ಣ ಪ್ರಮಾಣದ ಚಿತ್ರಗಳ ಆಂದೋಲನ ಪ್ರಾರಂಭವಾದ್ದು 1968ರಲ್ಲಿ, ಅವರ ಯಶಸ್ಸನ್ನು ಕಂಡದ್ದರಿಂದ 13 ವರ್ಷಗಳಷ್ಟು ದೀರ್ಘಕಾಲ ಯಾರೂ ಅದರಲ್ಲಿ ತೊಡಗಲೇ ಇಲ್ಲ. ಅವರು ತುಂಬಾ ದೊಡ್ಡವರು. ತುಂಬಾ ಮೇಧಾವಿ. ಆ

ಸಮಯದಲ್ಲಿ ಮೈಸೂರಿನಲ್ಲೇ ಯಾವ ಚಿತ್ರೋದ್ಯಮವೂ ಇಲ್ಲದಿದ್ದುದರಿಂದ ವ್ಯಾಪಾರಿ ಚಿತ್ರಗಳ ಬಗ್ಗೆ ಯೋಚಿಸುವುದೂ ಅಸಾಧ್ಯವಾಗಿತ್ತು. ಎಲ್ಲರಿಗೂ ಆದರ ಬಗ್ಗೆ ನಿರಾಶೆಯ ಮನೋಭಾವವೇ.

ಪ್ರಶ್ನೆ: ಹಾಗಾದರೆ ಕಾದಂಬರಿಯನ್ನು ಆಧರಿಸಿದ ಚಿತ್ರವನ್ನು ನೀವು ಮಾಡಿದಿರೇಕೆ? ಅದಕ್ಕೆ ಯಾವ ಪ್ರಚೋದನೆ?

ಉತ್ತರ: ಗೊತ್ತಿಲ್ಲ. ಸಿನಿಮಾದ ಬಗ್ಗೆ ಇದ್ದ ಈ ವ್ಯಂಗ್ಯ ಮನೋಭಾವ ಬಹುಶಃ ಒಂದು ಮುಖವಾಡ. ಪ್ರತಿಯೊಬ್ಬರಿಗೂ ಚಲನಚಿತ್ರದಲ್ಲಿ ಆಸಕ್ತಿ ಇದ್ದುದರಿಂದ ಅದೊಂದು ಬಗೆಯ ಬೋರಲು ಮೂರ್ಖತನ.

ಪ್ರಶ್ನೆ: ಆ ಸಮಯದಲ್ಲಿ ಅದು ವ್ಯಾಪಕವಾಗಿತ್ತು.

ಉತ್ತರ: ಅದೊಂದು ಬುದ್ಧಿಜೀವಿಗಳು ಎನ್ನಿಸಿಕೊಳ್ಳುವ ಪ್ರಯತ್ನ. ನಾನು 'ಸಂಸ್ಕಾರ' ಮಾಡಿದಾಗಲೂ ಕೂಡ ಅದೇ ನನ್ನ ಕೊನೆಯ ಚಿತ್ರ ಎಂಬ ನಂಬಿಕೆಯಿಂದಲೇ ಅದನ್ನು ಮಾಡಿದೆ. ಒಬ್ಬರು ತಮ್ಮ ಇಡೀ ಜೀವನದಲ್ಲಿ ಒಂದೇ ಒಂದು ಚಿತ್ರವನ್ನು ಮಾಡಬೇಕು. ಇಂಥ ಮನೋಭಾವ. ಅದೊಂದು ಅನುಭವ ಅಷ್ಟೆ. ಆ ಸಮಯಕ್ಕೆ ನಾನು ನಾಟಕಕಾರನಾಗಿ ಹೆಸರು ಮಾಡಿದ್ದೆ. ನಾಟಕಕಾರ ಎನ್ನಿಸಿಕೊಳ್ಳುವಲ್ಲಿ ನಂಗೆ ಸಂತೋಷವಿತ್ತು. ಚಿತ್ರ ತಯಾರಕನಾಗುವುದು ನನಗೆ ಬೇಕಿರಲಿಲ್ಲ. ಆದರೆ ನಾನು ಈ ಅನುಭವವನ್ನೂ ಪಡೆದುಕೊಂಡೇ ಬಿಡೋಣ ಎಂದುಕೊಂಡೆ. 'ಸಂಸ್ಕಾರ'ವನ್ನು ಬ್ರಾಹ್ಮಣರ ವಿರೋಧಿ ಎಂಬ ಕಾರಣಕ್ಕಾಗಿ ಸರ್ಕಾರ ಬಹಿಷ್ಕರಿಸಿತು. ಆ ದಿನಗಳಲ್ಲಿ ಅದೊಂದು ರಂಪವನ್ನೆಬ್ಬಿಸಿತು, ಚಿತ್ರ ಬಿಡುಗಡೆಯಾದಾಗ, ಕನ್ನಡದಲ್ಲೇ ಅಂದೊಂದು ಯಶಸ್ವಿ ಚಿತ್ರ ಎನ್ನಿಸಿತು. ಏಕೆಂದರೆ ಅದು ಬಹಿಷ್ಕರಿಸಲ್ಪಟ್ಟ ಮೊದಲ ಕನ್ನಡ ಚಿತ್ರ. ಅನಂತರ ಒಂದು ವರ್ಷದೊಳಗಾಗಿಯೇ ಅದು ಆ ವರ್ಷದ ಅತ್ಯುತ್ತಮ ಭಾರತೀಯ ಚಿತ್ರವೆಂದು ಪರಿಗಣಿಸಲ್ಪಟ್ಟು ರಾಷ್ಟ್ರಪತಿಗಳ ಚಿನ್ನದ ಪದಕ ಪಡೆಯಿತು.

ಚಿತ್ರಗಳಲ್ಲಿ ನನಗಿದ್ದ ಆಸಕ್ತಿ ಮುಗಿಯಿತೆಂದು ಭಾವಿಸಿದೆ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ಪ್ರಕಾಶನಕ್ಕೇ ರಾಜಿನಾಮೆಯಿತ್ತೆ. ಹಳ್ಳಿಗೆ ಹಿಂತಿರುಗಿ ದೇಶವನ್ನು ಅಧ್ಯಯನ ಮಾಡಿ ಪುಸ್ತಕವೊಂದನ್ನು ಬರೆಯುವ ಉದ್ದೇಶವಿತ್ತು. ನಾನು ಹಳ್ಳಿಯಲ್ಲೇ ಬೆಳೆದವ. ಕರ್ನಾಟಕಕ್ಕೆ ಹಿಂತಿರುಗಿ ಭಾಷೆಯ ಜತೆ ಸಂಪರ್ಕವನ್ನು ನವೀಕರಿಸಿಕೊಳ್ಳಬೇಕೆನ್ನಿಸಿತು.

ಆದರೆ ವಿಚಿತ್ರ ಸಂಗತಿಯೊಂದು ನಡೆಯಿತು, 'ವಂಶವೃಕ್ಷ' ಕನ್ನಡದ ಯಶಸ್ವೀ ಕಾದಂಬರಿ. ಅದರ ಲೇಖಕ ಭೈರಪ್ಪ ಕೊನೆಗೆ ಅದನ್ನು ಜಿ. ವಿ. ಅಯ್ಯರ್ ಅವರಿಗಿತ್ತರು. ಕಾರಂತರಿಗೆ ಚಿತ್ರ ನಿರ್ಮಾಣದ ಬಗ್ಗೆ ಗೊತ್ತಿರಲಿಲ್ಲ. ನಾವಿಬ್ಬರೂ ಒಳ್ಳೆಯ ಸ್ನೇಹಿತರಾದ್ದರಿಂದ ನಾವಿಬ್ಬರೂ ಸೇರಿ ಅದನ್ನು ಮಾಡಬಹುದೆಂದು ಅವರು ಸೂಚಿಸಿದರು. ಎರಡನೇ ಚಿತ್ರದಲ್ಲಿ ತೊಡಗಿದ್ದು ಹೀಗೆ. ಅದೇ ಪ್ರಕಾಶಕರು 'ಕಾಡು' ಹಸ್ತಪ್ರತಿಯನ್ನಿತ್ತರು. ಚಿತ್ರಗಳನ್ನು ಮಾಡುವುದು ಬೇಕಿಲ್ಲ ಎನ್ನುವುದು ಕಪಟತನ ಎನ್ನಿಸಿತು. ಹಸ್ತಪ್ರತಿ ಸುಂದರವಾಗಿತ್ತು. ಆ ಸಮಯದಲ್ಲಿ ಎಲ್ಲರೂ ಸರ್ಕಾರ ಬಹಿಷ್ಕರಿಸಿದ್ದರಿಂದಲೇ 'ಸಂಸ್ಕಾರ' ಯಶಸ್ವಿಯಾಯಿತು ಎಂದರು. 'ವಂಶವೃಕ್ಷ' ಜನಪ್ರಿಯ ಕಾದಂಬರಿಯಾದ್ದರಿಂದಲೇ ಅದು ಯಶಸ್ಸು ಗಳಿಸಿತು ಎಂದರು. ಆದರೆ 'ಕಾಡು' 25 ವರ್ಷ ವಯಸ್ಸಿನ ಒಬ್ಬ ತರುಣ ತನ್ನ ಬಾಲ್ಯದ ಅನುಭವವನ್ನು ಆಧರಿಸಿ ಬರೆದಿದ್ದ ಕಾದಂಬರಿ. ಸ್ವಾರಸ್ಯವೆಂದರೆ 'ಕಾಡು' ಸುಮಾರು 1946–47 ಸಮಯದಲ್ಲಿ, ಪುಸ್ತಕ ಹೊರಬಂದ 25 ವರ್ಷಕ್ಕೆ ಮುಂಚೆ ಹಳ್ಳಿಯೊಂದರಲ್ಲಿ ನಡೆದ ಘಟನೆಯ ಸಾಕ್ಷ್ಯಚಿತ್ರ. ನಾವು ಅದೇ ಹಳ್ಳಿಗೆ ಹೋದೆವು. ಅಲ್ಲೇ ಚಿತ್ರೀಕರಣ ನಡೆಸಿದವು. ಚಿತ್ರದಲ್ಲಿನ ಅನೇಕ ಪಾತ್ರಗಳು ಅಲ್ಲಿ ಇನ್ನೂ ಜೀವಂತವಾಗಿದ್ದವು. ಚಿತ್ರ ಕಗ್ಗೊಲೆಯಲ್ಲಿ ಕೊನೆಗೊಳ್ಳುತ್ತದೆ. ಜೈಲಿಗೆ ಹೋಗಿದ್ದ ಕೊಲೆಗಾರರು ಆ ಸಮಯಕ್ಕೆ ಹೊರ ಬಂದಿದ್ದರು. ಅವರೂ ಚಿತ್ರದಲ್ಲಿ ನಟಿಸಿದರು. ಚಿತ್ರದಲ್ಲಿ ಒಂದು ಪಂಚಾಯತಿ ದೃಶ್ಯವಿದೆ. ಅಲ್ಲಿ ಕೂತಿರುವ ಅನೇಕರು ಜೇಲಿನಿಂದ ಹೊರಬಂದ ಗ್ರಾಮದ ಹಿರಿಯರು. 15 ವರ್ಷಗಳ ನಂತರ ಅವರು ಹೊರಬಂದಿದ್ದರು.

ಪ್ರಶ್ನೆ : ನಿರ್ದೇಶನಕ್ಕೂ ಕಾರಂತರಿಗೂ ಯಾವ ಸಂಬಂಧವೂ ಇರಲಿಲ್ಲವೇ ?

ಉತ್ತರ : ಇಲ್ಲ. ಅವರು ಕಲಾ ನಿರ್ದೇಶಕರಾಗಿದ್ದರು. ಕಾರಂತ ಮತ್ತು ನಾನು ಹಿಂದಿನ ಚಿತ್ರ ಮಾಡಿದ್ದಾಗ, ಸಲೀಂ-ಜಾವೆದ್‌ರ ಹಾಗೆ ಅಥವಾ ಶಂಕರ್-ಜೈಕಿಷನ್, ಲಕ್ಷ್ಮೀಕಾಂತ್-ಪ್ಯಾರೇಲಾಲ್ ಜೋಡಿಯ ಹಾಗೆ ನಾವಾಗಬಾರದು ಎಂದು ನಿರ್ಧರಿಸಿಕೊಂಡಿದ್ದೆವು. ಇದರಿಂದ ನಾವು ಸತ್ತ ಹಾಗೇ ಎಂದು ಮಾತನಾಡಿಕೊಂಡೆವು. ಹೀಗೆ ಮಾಡಿದರೆ ನಾವಿಬ್ಬರೂ ಸ್ವತಂತ್ರರಾಗಿ ಬೆಳೆಯಲು ಸಾಧ್ಯವೇ ಇಲ್ಲ. ಆದ್ದರಿಂದ 'ಕಾಡು' ಚಿತ್ರವನ್ನು ನಾನೊಬ್ಬನೇ ನಿರ್ದೇಶಿಸಿದೆ. ಕಾರಂತ ಕಲೆ ಮತ್ತು ಸಂಗೀತ ನಿರ್ದೇಶಕರಾದರು. ಅನಂತರ ಕಾರಂತರು ಮಾಡಿದ ಚಿತ್ರದಲ್ಲಿ ನನ್ನ ಯಾವ ಪಾತ್ರವೂ ಇರಲಿಲ್ಲ, ಏಕೆಂದರೆ ನಾನು ಆ ಸಮಯಕ್ಕೆ ಫಿಲ್ಮ್ ಇನ್‌ಸ್ಟಿಟ್ಯೂಟ್‌ನ ನಿರ್ದೇಶಕನಾಗಿದ್ದೆ. ಹೀಗೆ ಈ ಎಲ್ಲ ಚಿತ್ರಗಳೂ ಯಶಸ್ವಿಯಾದವು—"ಹೊಸ ಅಲೆ' ಕನ್ನಡದಲ್ಲಿ ಸ್ಥಾಪಿತವಾಯ್ತು,

ಪ್ರಶ್ನೆ : ಕರ್ನಾಟಕವನ್ನು ಬಿಟ್ಟು ನೀವು ಅನಂತರ ಅವನ್ನು ತ್ಯಜಿಸಿದಿರಿ.

ಉತ್ತರ: 'ಹೊಸ ಅಲೆ'ಯನ್ನು ನಾನೇ ಮುಂದುವರಿಸಬೇಕು ಎನ್ನಿಸಲಿಲ್ಲ. ನಾನು ಜೀವನ ನಡೆಸಬೇಕಾಗಿತ್ತು. ಇನ್‌ಸ್ಟಿಟ್ಯೂಟ್‌ನಿಂದ ಹಿಂತಿರುಗಿ 'ಗೋಧೂಳಿ' ಮಾಡಿದೆ. ಆಮೇಲೆ 'ಒಂದಾನೊಂದು ಕಾಲದಲ್ಲಿ'. ಆದರೆ 1976ರ ಹೊತ್ತಿಗೆ ಪರಿಸ್ಥಿತಿ ಬದಲಾಗಿತ್ತು. ಹೊಸ ಅಲೆ ಚಿತ್ರಕ್ಕೆ ಭಾರೀ ಹೊಡೆತ ಉಂಟಾದದ್ದು ವರ್ಣಚಿತ್ರಗಳಿಂದ. ಅದಕ್ಕೆ ಮೊದಲು ನಾವು ಕಪ್ಪು-ಬಿಳುಪು ಚಿತ್ರಗಳನ್ನು ತಯಾರಿಸ ಬಹುದಾಗಿತ್ತು. ಈಗ ವರ್ಣಚಿತ್ರವೆಂದರೆ ನಿಮ್ಮ ಬಜೆಟ್‌ನ $3\frac{1}{2}$ ಪಟ್ಟು, ಕೊನೇಪಕ್ಷ 3ಪಟ್ಟು ಹೆಚ್ಚುತ್ತದೆಂದು ಅರ್ಥ. ಈಸ್ಟ್‌ಮನ್ ಕೊಡಕ್ ಆಗಿದ್ದರೆ ಬ್ಯಾಂಕ್ ಗ್ಯಾರಂಟಿ ಕೊಡಬೇಕು, ಇತ್ಯಾದಿ. ಇದರ ಫಲಿತಾಂಶ; ಈಗ ಅದು ಸಣ್ಣ ಬಜೆಟ್ ಅಲ್ಲ.

ಪ್ರಶ್ನೆ : ನೀವು ಫಿಲ್ಮ್ ಇನ್‌ಸ್ಟಿಟ್ಯೂಟ್‌ಗೆ ಹೋದಾಗ ಅಥವಾ ಈಗ ಚಲನಚಿತ್ರದಲ್ಲಿ ತರಬೇತಿ, ಅದರ ತತ್ತ್ವದ ಕಲಿಕೆ, ಶಾಲೆಗಳಲ್ಲಿ ಅದನ್ನು ಕಲಿಯುವುದು ಇವೆಲ್ಲ ಅತ್ಯುತ್ತಮ ವಿಧಾನಗಳೆನ್ನಿಸುತ್ತವೆಯೇ ?

ಉತ್ತರ: ಖಂಡಿತ, ಹೊಸ ಅಲೆ ಕನ್ನಡದಲ್ಲಿ ವಿಫಲವಾಗುವುದಕ್ಕೆ ಕಾರಣ ವರ್ಣಚಿತ್ರಗಳು ಮಾತ್ರವೇ ಅಲ್ಲ, ಈ ಮೂರ್ನಾಲ್ಕು ಚಿತ್ರಗಳು ಬಿಡುಗಡೆಯಾದ ಹೊಸದರರಲ್ಲಿ ಬಂದವರನೇಕರು ತಾಂತ್ರಿಕ ದೃಷ್ಟಿಯಿಂದ ಅಸಮರ್ಥರೆನ್ನಿಸಿದರು. ನಾಟಕಕಾರನಾದ ನಾನು, ರಂಗಭೂಮಿಯಲ್ಲಿ ಪರಿಣತರಾದ ಕಾರಂತರು ಯಶಸ್ವಿಯಾದ್ದನ್ನು ಕಂಡ ಅವರು ಚಿತ್ರನಿರ್ಮಾಣಕ್ಕೆ ಕೇವಲ ಪ್ರತಿಭೆಯಿದ್ದರೆ ಸಾಕು ಎಂದು ಬಗೆದರು. ಅವರಿಗೆ ಕಲಿಯುವ ಅಗತ್ಯವಿರಲಿಲ್ಲ. ಚಿತ್ರಗಳನ್ನು ಮಾಡುವುದು ಹೇಗೆಂಬುದನ್ನು ಕಲಿಯಲು ಕಾರಂತ ಮತ್ತು ನಾನು ತುಂಬಾ ಶ್ರಮ ವಹಿಸಿದ್ದೆವು. ತಾಂತ್ರಿಕವಾಗಿ ತುಂಬಾ ಕೆಟ್ಟದಾಗಿದ್ದ ಚಿತ್ರಗಳನ್ನು ಅವರು ತಯಾರಿಸಿದರು. ಕೆಟ್ಟ ಛಾಯಾಗ್ರಹಣ, ಕೆಟ್ಟ ಸಂಕಲನ, ಕೆಟ್ಟ ನಿರ್ದೇಶನ. ಅವನ್ನು ಇನ್‌ಸ್ಟಿಟ್ಯೂಟ್ ವಿದ್ಯಾರ್ಥಿಗಳು ತಯಾರಿಸಿದ ಕೆಲವು ಚಿತ್ರಗಳಿಗೆ —ಘಾರ್ಷಿ ಭಾವ್ರೈ ಅಥವಾ ಆಲ್ಬರ್ಟ್‌ಪಿಂಟೊಕೊ ಗುಸ್ಸಾಕ್ಯೋ ಆತಾ ಹೈ— ಹೋಲಿಸಿ ನೋಡಿ. ಚಿತ್ರಗಳು ನಿಮಗೆ ಇಷ್ಟವಾಗುತ್ತವೋ ಅವುಗಳ ತಾಂತ್ರಿಕ ಗುಣಮಟ್ಟವಂತೂ ತುಂಬಾ ಹೆಚ್ಚಿನದು. ಅವರು ಗಂಭೀರ ರೀತಿಯ ಚಿತ್ರಗಳನ್ನು ತಯಾರಿಸುತ್ತಿದ್ದಾರೆ.

ಪ್ರಶ್ನೆ ; ಹಾಗಾದರೆ ನೀವೇಕೆ ಅಷ್ಟು ಬೇಗನೆ ಇನ್‌ಸ್ಟಿಟ್ಯೂಟನ್ನು ಬಿಟ್ಟರಿ ?

ಉತ್ತರ : ಏಕೆಂದರೆ ನಾನು ಅದರಲ್ಲೇ ಮುಳುಗಿಹೋಗಲು ತೊಡಗಿದೆ. ನನಗೆ ಆ ಕೆಲಸದಲ್ಲಿ ತುಂಬಾ ಸಂತೋಷವುಂಟಾಗತೊಡಗಿ ದಿನಕ್ಕೆ 16-17 ಗಂಟೆಗಳು ದುಡಿಯುತ್ತಿದ್ದೆ. ಇನ್‌ಸ್ಟಿಟ್ಯೂಟ್ ನನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳತೊಡಗಿದ್ದರಿಂದ ನನಗೆ ಬರೆಯುವುದಾಗಲಿ ಅಥವಾ ಮತ್ತೊಂದು ಚಿತ್ರವನ್ನಾಗಲೀ ಮಾಡುವುದು ಸಾಧ್ಯವಿಲ್ಲವೆಂದೆನಿಸಿತು. ಅದೂ ಅಲ್ಲದೆ ಅಧಿಕಾರಿಯಾಗುವುದು ನನಗೆ ಬೇಕಿರಲಿಲ್ಲ.

ಪ್ರಶ್ನೆ : ಕನ್ನಡ ಚಿತ್ರಗಳನ್ನು ನಿರ್ದೇಶಿಸುವುದನ್ನು ನಿಲ್ಲಿಸಿ ಹಿಂದಿ ಚಿತ್ರಗಳಲ್ಲಿ ನಟಿಸಲು ಪ್ರಾರಂಭಿಸಿದ್ದಕ್ಕೆ ಕಾರಣವೇನು ? ವ್ಯಾಪಾರಿ ಚಿತ್ರಗಳಲ್ಲಿ.

ಉತ್ತರ : 1976ರಲ್ಲಿ ನಾನು ಮೂರು ಚಿತ್ರಗಳಲ್ಲಿ ನಟಿಸಿದೆ : ಶ್ಯಾಂಗಾಗಿ (ಬೆನೆಗಾಲ್) ಮಂಥನ್, ಬಸು (ಚಟರ್ಜಿ) ಗಾಗಿ ಸ್ವಾಮಿ ಮತ್ತು ಶ್ರೀಧರ್‌ಗಾಗಿ ಕನಕಾಂಬರ ಎಂಬ ಚಿತ್ರದಲ್ಲಿ. ಆ ವರ್ಷ ಒಟ್ಟು 50,000 ರೂ ಸಂಪಾದಿಸಿದೆ. ಗೋಧೂಳಿಯಿಂದ–ಅದರ ಕನ್ನಡ ಹಾಗೂ ಹಿಂದಿ ಅವತರಣಿಕೆಯಿಂದ ಎರಡು ವರ್ಷಗಳಲ್ಲಿ ನನಗೆ ಕೊಟ್ಟದ್ದು 11,000 ರೂ. ಈ ಮೂರು ಚಿತ್ರಗಳಲ್ಲಿ ನಟಿಸಿದ್ದರಿಂದಲೇ ನಾನು ಬದುಕುತ್ತಿರುವುದು. ಹೀಗೆ ನಾನು ನಾಲ್ಕೈದು ವರ್ಷಗಳ ಕಾಲ ಹಣ ಸಂಪಾದನೆಯಲ್ಲಿ ತೊಡಗುತ್ತೇನೆ. ಆಮೇಲೆ ನನಗೆ ಬೇಕಾದಂತಹ ಚಿತ್ರಗಳನ್ನು ನಿರ್ದೇಶಿಸಲು ಶುರು ಮಾಡುತ್ತೇನೆ. ಏಕೆಂದರೆ ಆಗ ಕಡೇ ಪಕ್ಷ ಎರಡು ಗುರಿಗಳಿರುತ್ತವೆ. ಒಬ್ಬರು ಹಣಕ್ಕಾಗಿ ನಿರ್ದೇಶನ ಮಾಡಬಹುದು. ಇಲ್ಲ ನೀವು ನಿರ್ಮಾಪಕರ ಇಚ್ಛೆಗೆ ಅನುಗುಣವಾಗಿ ನಿರ್ದೇಶಿಸಬೇಕಾಗುತ್ತದೆ. ಅಥವಾ ನಿಮಗೆ ಬೇಕಾದಂತಹ ಚಿತ್ರಗಳನ್ನು ನಿರ್ದೇಶಿಸಬಹುದು. ಹಾಗಾದಾಗ ನೀವು ದುಡ್ಡಿನ ಬಗ್ಗೆ ಯೋಚಿಸಲಾಗುವುದಿಲ್ಲ. ನೀವು ಬೇರಿನ್ನಾವುದಾದರೂ ಮೂಲದಿಂದ ಹಣ ಪಡೆಯಬೇಕು. ನನಗೆ ಆ ಸಮಯದಲ್ಲಿ ಯಾರ ಸಂಪನ್ಮೂಲವೂ ಇರಲಿಲ್ಲ. ನಾನು ಉಳಿಯುತ್ತಲೇ ಇರಲಿಲ್ಲ, ನನ್ನ ಹೆಸರೂ ಉಳಿಯುತ್ತಿರಲಿಲ್ಲ.

ಪ್ರಶ್ನೆ : ವ್ಯಾಪಾರಿ ಚಿತ್ರ ಜಗತ್ತಿನ ಬಗ್ಗೆ ನಿಮಗೆ ಏನನ್ನಿಸುತ್ತದೆ.

ಉತ್ತರ : ಹಿಂದಿ ವ್ಯಾಪಾರಿ ಚಿತ್ರಕ್ಕೆ ಹಾಲಿವುಡ್‌ನಂತರ ಜಗತ್ತಿನಲ್ಲೇ ಅತಿ ದೊಡ್ಡ ಮಾರುಕಟ್ಟೆ ಇದೆ ಎಂಬುದನ್ನು ನೀವು ಮರೆಯಲಾಗದು. ಸಾಂಸ್ಕೃತಿಕವಾಗಿ ಅಥವಾ ಭಾಷಾ ವಿಷಯದಲ್ಲಿ ಯಾವ ರೀತಿಯ ಸಾಮ್ಯವನ್ನೂ ಹೊಂದಿರದಂತಹ ವಿಭಿನ್ನ ಮಾರುಕಟ್ಟೆಗಳ ಅಗತ್ಯವನ್ನು ಅದು ಪೂರೈಸುತ್ತಿದೆ. ಆದ್ದರಿಂದ ಅದರಲ್ಲಿ ಮನೋರಂಜನೆಯನ್ನು ಅನಿವಾರ್ಯವಾಗಿ ಸರಳೀಕರಿಸಲೇ ಬೇಕಾಗುತ್ತದೆ.

ಭಾಷೆಯ ಸೂಕ್ಷ್ಮತೆ, ನಟನೆ ಅಥವಾ ಪರಿಸ್ಥಿತಿಯ ಸೂಕ್ಷ್ಮತೆ, ಅವುಗಳ ಲ್ಲಿರಲು ಸಾಧ್ಯವೇ ಇಲ್ಲ. ಈ ಚಿತ್ರಗಳಿಗೆ ವಿಸ್ತಾರ ತಳಹದಿಯಿರಬೇಕು. ನೀವು ಇಷ್ಟಪಟ್ಟ ಯಾವುದೇ ವರ್ಗ ಅದರಲ್ಲಿ ತಮ್ಮನ್ನು ಗುರುತಿಸಿಕೊಳ್ಳಬೇಕು.

ಪ್ರಶ್ನೆ : ಹಾಗಾದರೆ ನೀವು ಇನ್ನೊಂದು ರೀತಿಯ ಚಿತ್ರವನ್ನು ಮಾಡಲು ಬಯಸುವು ದೇಕೆ ?

ಉತ್ತರ : ನನ್ನ ವಿಷಯ ಹೇಳುವುದಾದರೆ ನನಗದು ಬೇಕು ಎನ್ನುವುದಕ್ಕಿಂತ ಬೇರೆ ಯಾವ ಕಾರಣವೂ ಇಲ್ಲ. ಒಬ್ಬರು ಏಕೆ ಸೃಜನಶೀಲರಾಗಬೇಕು ಎನ್ನು ವುದಕ್ಕೆ ಕಾರಣವಿಲ್ಲ. ಸಾಂಸ್ಕೃತಿಕ ವಿವರಗಳು, ಸರಿಯಾಗಿ ಬಳಕೆಯಾದ ಭಾಷೆ, ತುಂಬಾ ಸಾಂಸ್ಕೃತವಾಗಿ ರೂಪುಗೊಂಡಿರುವ ಚಿತ್ರಗಳ ಮೂಲಕ ನನ್ನನ್ನು ಅಭಿವ್ಯಕ್ತಿಸಿಕೊಳ್ಳಬೇಕು ಎಂಬ ಕಾರಣಕ್ಕಾಗಿ. ಸಂಸ್ಕೃತಿಯ ಚೌಕಟ್ಟಿನ ಹೊರ ಗಡೆಯೂ ಒಬ್ಬಾತ ಇದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು.

ಪ್ರಶ್ನೆ : ಈ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಜನರಿಗೆ ಸಾಮಾನ್ಯವಾಗಿ ಬಳಕೆಯಾಗಿರುವ, ಅವರೊಡವೆ ಸಂವಹನವೇರ್ಪಡಿಸಿಕೊಳ್ಳಬಲ್ಲ ಅಥವಾ ಅವರಿಗೆ ಯಾವುದಾ ದರೂ ಅರ್ಥ ದೊರಕಿಸಿಕೊಟ್ಟು ಅವರ ಮೇಲೆ ಪರಿಣಾಮ ಬೀರುವ ಚಲನ ಚಿತ್ರಗಳನ್ನು ಮಾಡಬೇಕೆಂದು ನಿಮಗನ್ನಿಸುತ್ತದೆಯೋ ಅಥವಾ ನಿಮ್ಮನ್ನೇ ಅಭಿವ್ಯಕ್ತಗೊಳಿಸಿಕೊಳ್ಳುವುದು ಒಂದು ವೈಯಕ್ತಿಕ ಆಸೆಯಾಗುತ್ತದೋ ?

ಉತ್ತರ : ಇವೆರಡೂ ಪ್ರತ್ಯೇಕ ವಿಷಯಗಳಲ್ಲ. ನಿಮ್ಮನ್ನು ಅಭಿವ್ಯಕ್ತಗೊಳಿಸಿ ಕೊಳ್ಳಬೇಕೆಂದು ಬಯಸಿ ನೀವು ಸಂಹವನವನ್ನು ಪರಿವರ್ತಿಸಿಕೊಳ್ಳಲಾಗದಿದ್ದರೆ ಜನರಿಗೆ ಅರ್ಥವಾಗುವುದಿಲ್ಲ. ಅದೃಷ್ಟವಷಾತ್ ನಾನು ಹೇಳಬೇಕೆಂದು ಅಂದು ಕೊಂಡಿದ್ದೆಲ್ಲದ್ದಕ್ಕೂ ಪ್ರೇಕ್ಷಕರು ದೊರೆತಿದ್ದಾರೆ. ಅದು ರಂಗಭೂಮಿಯೇ ಆಗಿರ ಬಹುದು ಅಥವಾ ಚಲನಚಿತ್ರ ಇರಬಹುದು ನನ್ನ ಸಂಹವನಶಕ್ತಿ ಜನರು ಅರ್ಥ ಮಾಡಿಕೊಳ್ಳಲಾಗದಷ್ಟು ಸೂಕ್ಷ್ಮವಲ್ಲ, ಕಷ್ಟಕರವಲ್ಲ ಅಥವಾ ಪ್ರಾಯೋಗಿಕವಾದು ದಲ್ಲ.

ಪ್ರಶ್ನೆ : ನಿಮ್ಮ ಮುಂದಿನ ಚಿತ್ರಕ್ಕೆ ನೀವು ಸಂಸ್ಕೃತ ನಾಟಕವನ್ನು ಆಯ್ದುಕೊಳ್ಳ ಬೇಕೆಂದು ಬಯಸುವುದೇತಕ್ಕೆ ?

ಉತ್ತರ : ಹಿಂದಿನವು, ನೀವು ಏನನ್ನು ಬಯಸಬೇಕೆಂದು ಹೇಳುತ್ತೀರೋ ಅದನ್ನು ನಿಯಂತ್ರಿಸುವ ಸಾಮರ್ಥ್ಯವನ್ನು ನಿಮಗೆ ನೀಡುತ್ತದೆ. ಒಂದು ಸಮಕಾಲೀನ ವಸ್ತು,

ಅದು ಸಮಕಾಲೀನ ಎಂಬ ಕಾರಣಕ್ಕಾಗಿ, ಅನೇಕ ಬೇಡಿಕೆಗಳನ್ನೊಡ್ಡುತ್ತವೆ. ಅತಿಯಾಗಿ ತತ್ತ್ವವೊಂದಕ್ಕೆ ಬದ್ಧರಾಗಿರುವವರ ಮೇಲೆ ಹೆಚ್ಚು ಪರಿಣಾಮವನ್ನು ಯಾವಾಗಲೂ ಬೀರುತ್ತಿದ್ದ ಬ್ರೆಕ್ಟ್ ತಾನು ಎಂದು ಸಮಕಾಲೀನ ವಸ್ತುವನ್ನು ಆಯ್ದುಕೊಂಡಿರುತ್ತಿರಲಿಲ್ಲವೋ ಆ ನಾಟಕಗಳ ಮೂಲಕವೇ ಅತ್ಯುತ್ತಮ ಸಂವಹನವನ್ನು ಏರ್ಪಡಿಸಿಕೊಳ್ಳುತ್ತಿದ್ದ. ಗೆಲಿಲಿಯೋ, ಗುಡ್‌ವುಮನ್ ಆಫ್ ಜೆಕ್‌ವಾನ್, ಇವುಗಳಲ್ಲಿ ಅವನು ಯಾವಾಗ ಪ್ರೇಕ್ಷಕರನ್ನು ಸಮಕಾಲೀನ ಪರಿಸ್ಥಿತಿಯಿಂದ ಹೊರಗೆ ಕರೆದೊಯ್ಯುತ್ತಿದ್ದನ್ನು ಆಗ ಅವರೊಂದಿಗೆ ಅತ್ಯುತ್ತಮ ಸಂಪರ್ಕವನ್ನು ಬೆಳೆಸಿಕೊಳ್ಳುತ್ತಿದ್ದ. ನೀವೀಗ ನೂರು ವರ್ಷದ ಯುದ್ಧದ ಸಂದರ್ಭದಲ್ಲಿನ ಯುರೋಪನ್ನು ಕಾಣುತ್ತೀರಿ, ಮದರ್ ಕರೇಜ್ ನೋಡಿ. ನನಗೆಲ್ಲ ಒಂದೇ ಎನ್ನಿಸುತ್ತದೆ. ತುಘಲಕ್‌ದಲ್ಲಿ ದೆಹಲಿ ಸುಲ್ತಾನನೊಬ್ಬನನ್ನು ಕುರಿತು ಬರೆಯಲಾಯಿತು. ಅವನು ಅಖಿಲಭಾರತ ಸುಲ್ತಾನನೂ ಅಲ್ಲ. ಇದನ್ನು ಕೇರಳದಲ್ಲೂ ಅಭಿನಯಿಸಲಾಗಿದೆ, ಏಕೆಂದರೆ ಅನಿವಾರ್ಯವಾಗಿ ಅದು ಯಾವುದೋ ಸಮಕಾಲೀನ ಮೌಲ್ಯಗಳನ್ನು ಧ್ವನಿಸುತ್ತದೆ.

ಪ್ರಶ್ನೆ : ಸರ್ವಸಾಮಾನ್ಯವಾದ ಶಾಶ್ವತ ಮಾನವೀಯ ಮೌಲ್ಯಗಳು

ಉತ್ತರ : ಇಂದು ಯಾವುದು ಪ್ರಚಲಿತವಾಗಿದೆಯೋ ಅದನ್ನು ಆಧರಿಸಿ ನಾವು ನಾಟಕವನ್ನಾಗಲಿ, ಚಲನಚಿತ್ರವನ್ನಾಗಲಿ ಕೊಡಬೇಕೆಂದು...ಉದಾಹರಣೆಗೆ ಹರಿಜನರನ್ನು ಸುಡುವುದು... ಈಗ ನಾನು ರಾಜಕೀಯ ಚಿತ್ರವೊಂದನ್ನು ಮಾಡುತ್ತಿದ್ದೇನೆ. ಆ ವಿಷಯದ ಮೇಲೆ ಚಿತ್ರವನ್ನು ಮಾಡುತ್ತಿದ್ದೇನೆ ಎನ್ನುವುದರಿಂದ ಸಮಸ್ಯೆ ನಿವಾರಣೆಯಾಗುವುದಿಲ್ಲ. ಆದರೆ ನನ್ನನ್ನು ಸಮಕಾಲೀನ ಚಿತ್ರ ತಯಾರಕನೆಂದು ಪರಿಗಣಿಸಲಾಗುತ್ತದೆ. ಅದು ಆ ವಸ್ತುವನ್ನು ದುಡಿಸಿಕೊಂಡ ಹಾಗೆ. ನಾನು ಅದನ್ನು ನನ್ನ ಉದ್ದೇಶಕ್ಕಾಗಿ ಬಳಸುತ್ತೇನೆ. ನನಗೆ ಆ ಸಮಸ್ಯೆಯ ಬಗ್ಗೆ ಏನಾದರೂ ಕಾಳಜಿಯಿದ್ದರೆ ನಾನಲ್ಲಿಗೆ ಹೋಗಿ ಅವರಿಗಾಗಿ ಕೆಲಸ ಮಾಡುತ್ತೇನೆ.

ಪ್ರಶ್ನೆ : ಆದರೆ ಅನೇಕ ಶತಮಾನಗಳ ಹಿಂದಕ್ಕೆ ಸರಿಯುವುದರಿಂದ ಪ್ರೇಕ್ಷಕರನ್ನು ವಾಸ್ತವತೆಯಿಂದ ಬೇರ್ಪಡಿಸಿದಂತಾಗಿ ಸಮಸ್ಯೆ ತೆಳುವಾಗುವುದಿಲ್ಲವೆ ?

ಉತ್ತರ : ಇಲ್ಲ, ನಿಜವಾಗಿ ನೀವಾಗ ನಿಮ್ಮ ಸಮಸ್ಯೆಯ ಮೇಲೆ ಹೆಚ್ಚು ಗಮನ ವಿಡುತ್ತೀರಿ. ದೆಹಲಿಯಲ್ಲಿ ತುಘಲಕ್ ನಡೆಯುತ್ತಿದ್ದಾಗ ಅದನ್ನು ನೋಡಲು ಬಂದಿದ್ದ ಪ್ರಧಾನ ಮಂತ್ರಿಗಳು ವೇದಿಕೆಯ ಮೇಲೆ ಆಹಾರಕ್ಕಾಗಿ ಗದ್ದಲ ನಡೆಯುವ ದೃಶ್ಯ ಬಂದಾಗ ಹೊರಗೆದ್ದು ಹೋದರು ಎಂದು ಕೇಳಿದ್ದೇನೆ. ತುಘಲಕ್‌ನ ಕಾಲದಲ್ಲಿ ಆಹಾರಕ್ಕಾಗಿ ಚಳವಳಿ ನಡೆದದ್ದರಿಂದ ನಾನದನ್ನು ಬರೆದಿದ್ದೇನೆ. ಆದರೆ

ಆ ಸಮಯದಲ್ಲಿ, ಐವತ್ತರ ದಶಕದಲ್ಲಿ, ಆಹಾರಕ್ಕಾಗಿ ಚಳವಳಿಗಳು ಪ್ರಾರಂಭವಾಗಿರದೆ ಅನಂತರ ಅವು ಗಂಭೀರ ಸ್ಥಿತಿಯನ್ನು ಮುಟ್ಟಿದ್ದವು. ಇಲ್ಲಿ ನಾನು ಹೇಳುವುದು, ಸಮಕಾಲೀನ ವಸ್ತುವೊಂದನ್ನು ಆಯ್ದುಕೊಳ್ಳುವ ಮೂಲಕ ನೀವು ಸಮಕಾಲೀನ ಸೂಕ್ಷ್ಮತೆಯನ್ನು ಬೆಳೆಸಲಾರಿರಿ. ನಿಮಗದಿದ್ದರೆ ಇರುತ್ತದೆ, ಇಲ್ಲದಿದ್ದರೆ ಇಲ್ಲ. ನಿಮಗೆ ಸಮಕಾಲೀನ ಪ್ರಜ್ಞೆಯಿದ್ದರೆ, ನೀವು ಒಂದು ಗ್ರೀಕ್ ವಸ್ತುವನ್ನು ಆಯ್ದುಕೊಂಡರೂ ಭಾಧಕವಿಲ್ಲ. ಅನ್‌ಯಿಲ್‌ನ ಆಂಟಿಗೊನಿ ಇನ್ನೂ ಏಕೆ ಆಡಲ್ಪಡುತ್ತಿದೆ. ಅದನ್ನು 1942ರಲ್ಲಿ ನಾಜಿಗಳ ವಿರುದ್ಧ ಬರೆಯಲಾಯಿತು ಎನ್ನಲಾಗಿದ್ದರೂ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಅದನ್ನು ಬಹಿಷ್ಕರಿಸಲಾಯಿತು. ಡಾ॥ ಲಾಗೂ ಅದನ್ನು ಮುಂಬಯಿಯಲ್ಲಿ ಆಡಲು ಬಯಸಿದಾಗ ಅದನ್ನು ಕೈಬಿಡುವಂತೆ ಜನರು ಅವನಿಗೆ ನಯವಾಗಿ ಭೋಧಿಸಿದರು. ಗುಲ್ಜಾರ್ ಅದರ ಬಗ್ಗೆ ಚಿತ್ರ ಮಾಡಬೇಕೆಂದಾಗ ಆ ಪ್ರಯತ್ನವನ್ನು ಬಿಡುವಂತೆ ಸೂಚಿಸಲಾಯಿತು. ಅನ್‌ಯಿಲ್‌ನ ಅಂಟಿಗೊನೆಯನ್ನು 1942 ರಲ್ಲಿ ನಾಜಿಗಳ ವಿರುದ್ಧವಾಗಿ ಬರೆದಿರುವುದರಿಂದ, ಮೂವತ್ತು ವರ್ಷಗಳ ನಂತರ ಮತ್ಯಾವುದೋ ದೇಶದಲ್ಲಿ, ಮತ್ಯಾವುದೋ ಪರಿಸ್ಥಿತಿಯಲ್ಲಿ ಅದು ಜನರನ್ನು ನೋಯಿಸುವ ಕಾರಣವಿಲ್ಲ. ಕೆಲಸದಲ್ಲಿ ತೊಡಗಲು ನಿಮಗೆ ಸಮಕಾಲೀನ ವಸ್ತುವೊಂದರ ಅಗತ್ಯವಿಲ್ಲ, ನೀವು ಯಾವುದೇ ವಿಷಯವನ್ನು ಆಯ್ದುಕೊಳ್ಳಬಹುದು. ವಸ್ತುವಿನ ಸಮಕಾಲೀನತೆ, ಕಳೆದ 100 ವರ್ಷಗಳಿಂದ ಮಾತ್ರ ಒಂದು ಫ್ಯಾಷನ್ ಆಗಿ ಪರಿಣಮಿಸಿದೆ. ಇಬ್ಸನ್‌ನ ನಂತರ ಅದು ಪ್ರಾಮುಖ್ಯತೆಯ ಅಳತೆಗೋಲಾಗಿದೆ. ಕೊನೆಯಲ್ಲಿ ಮುಖ್ಯವಾಗುವುದು ವಸ್ತುವಿನ ನಾಯಕನಲ್ಲ, ವಸ್ತುವನ್ನು ಕುರಿತ ಮನೋಭಾವ. ಬದ್ಧತೆ ವಸ್ತುವಿನಿಂದ ಬರುವುದಲ್ಲ, ಬರಹಗಾರನ ಮನಸ್ಸಿನ ಮೂಲಕ.

ಪ್ರಶ್ನೆ : ವಾಸ್ತವವಾಗಿ, ಭಾರತೀಯ ಸಿನಿಮಾದ ಅನೇಕ ಪ್ರಕರಣಗಳಲ್ಲಿ, ಸ್ಥಗಿತ ಮೌಲ್ಯಗಳನ್ನು ಉತ್ತೇಜಿಸುವಂತಹ ವಾತಾವರಣವಿದೆ.

ಉತ್ತರ : ದೂರದರ್ಶನದಲ್ಲಿ ಅದನ್ನು ತೋರಿಸುವುದೇಕೆ ಎಂದುಕೊಂಡಿದ್ದೀರಿ ? ಅದು ಸ್ಥಗಿತ ಸ್ಥಿತಿಯನ್ನು ಬೆಂಬಲಿಸುವುದರಿಂದ ಅದನ್ನು ಮನೆಮನೆಗೆ ಕೊಂಡೊಯ್ಯಲಾಗುತ್ತದೆ. ಅದು ನಿಮ್ಮ ಕುಟುಂಬ ಮುಖ್ಯವೆಂದು ಹೇಳುತ್ತದೆ. ರಾಜಕೀಯ ಪರಿಸ್ಥಿತಿಯ ಬಗ್ಗೆ ಚಿಂತಿಸಬೇಡಿ, ಏನನ್ನೂ ಮಾಡಬೇಡಿ, ನಿಮ್ಮ ತಾಯಿ, ನಿಮ್ಮ ಬಂಧು, ಬಳಗ, ಇಷ್ಟೆ. ಸರ್ಕಾರಕ್ಕೆ ಅದು ಬೇಕು. ಭಾರೀ ವ್ಯಾಪಾರಿ ಚಿತ್ರೋದ್ಯಮದ ಬಗ್ಗೆ ಅದಕ್ಕೆ ಒಲವಿದೆ. ಅದು ಸ್ಥಗಿತ ಸ್ಥಿತಿಯನ್ನು ಎತ್ತಿ ಹಿಡಿಯುತ್ತದೆ, ಅದು ಕ್ರಾಂತಿಗೆ ವಿರುದ್ಧ, ಚಿಂತನಶೀಲತೆಗೆ ವಿರುದ್ಧ, ಅದು ಭಾವನೆಗಳನ್ನು ಸಾಮಾಜಿಕ ವ್ಯವಸ್ಥೆಯ ಒಂದು ಚೌಕಟ್ಟಿನೊಳಗೆ ಹೊಲ್ಮಿಸುತ್ತದೆ.

ಅವು ಅಸಾಮಾನ್ಯ ಪರಿಸ್ಥಿತಿಯಿಂದ ಉಂಟಾದುದಲ್ಲ, ಸಾಮಾನ್ಯ ಪರಿಸ್ಥಿಯಿಂದ ಉಂಟಾದುದಲ್ಲ, ಸಾಮಾನ್ಯ ಪರಿಸ್ಥಿತಿಯಿದೆ. ನಿಮ್ಮ ತಾಯಿ, ನಿಮ್ಮ ಹೆಂಡತಿ, ನಿಮ್ಮ ಗಂಡ...

ಪ್ರಶ್ನೆ : ಜನಪ್ರಿಯ ಹಾದಿ ವ್ಯಾಪಾರಿ ಚಿತ್ರಗಳು ಸಾಮಾಜಿಕವಾಗಿ ಅಪಾಯಗಳನ್ನು ಒಡ್ಡುತ್ತದೆ ಎಂದು ಹೇಳುತ್ತೀರಾ ?

ಉತ್ತರ : ಅದು ಅಪಾಯಕಾರಿಯಲ್ಲ, ಅದು ಈಗಿರುವ ಮನರಂಜನೆಯ ಏಕಮಾತ್ರ ಮಾಧ್ಯಮ ಎಂಬ ಸರಳ ಕಾರಣಕ್ಕಾಗಿ ಅದರ ಮೇಲೆ ಹೆಚ್ಚು ಒತ್ತನ್ನು ಹಾಕಲಾಗುತ್ತದೆ. ಅದು ಸ್ಥಗಿತ ಸ್ಥಿತಿಯನ್ನು ಒಳಗೊಂಡಿರುತ್ತದೆ. ಎಲ್ಲೆಡೆಗಳಿಂದ ಅದಕ್ಕೆ ಬೆಂಬಲ ದೊರೆಯುತ್ತವೆ. ಉದಾಹರಣೆಗೆ ತತ್ತ್ವನಿಷ್ಠ ಚಿತ್ರ ನಿರ್ಮಾಪಕ ರೆಂದು ಹೇಳಲಾದಂತಹ ಕೆ. ಎ. ಅಬ್ಬಾಸ್ ಅಂಥವರು ಮುಂದಿಡುವ ತತ್ತ್ವ ಬಡ ವರು ಒಳ್ಳೆಯವರು, ಶ್ರೀಮಂತರು ಕೆಟ್ಟವರು ಎಂಬುದು. ಬಡವರು ಒಳ್ಳೆಯವ ರಾಗಿದ್ದು ಶ್ರೀಮಂತರು ಕೆಟ್ಟವರಾಗಿದ್ದರೆ, ನೀವು ಬಡವರಿಗೆ ಬಡವರಾಗೇ ಉಳಿಯ ಬೇಕೆಂದು ತಿಳಿಸುತ್ತಿದ್ದೀರಿ. ನೀವು ಶ್ರೀಮಂತರಾದರೆ ಕೆಟ್ಟವರಾಗುತ್ತೀರಿ. ನೈತಿಕ ಪರಿಣಾಮ ತುಂಬಾ ಸ್ಪಷ್ಟವಾಗಿದೆ. ಇಂಥ ಸೂಕ್ಷ್ಮತೆ ವಾಸ್ತವವಾಗಿ ಕ್ರಾಂತಿಕಾರಿ ಯಾದುದಲ್ಲ. ಅಬ್ಬಾಸ್ ಅವರು 'ಶೆಹರ್ ಔರ್ ಸಪ್ನಾ' ಚಿತ್ರವನ್ನು ಮಾಡಿದಾಗ ಅದು ವಿಫಲವಾಯಿತು. ಆದರೆ ಆ ವ್ಯಕ್ತಿ ತಮ್ಮನ್ನು ತಾವೇ ಒಬ್ಬ ಕಮ್ಯೂನಿಸ್ಟ್, ಎಡಪಂಥಿ ಮತ್ತು ಒಬ್ಬ ಕ್ರಾಂತಿಕಾರಿ ಎಂದು ಕರೆದುಕೊಂಡರು.

ಪ್ರಶ್ನೆ : ಮೃಣಾಳ್ ಅವರ ವಿಚಾರದಲ್ಲಿ ಹೇಗೆ, ಅವರ ಮೊದಲ ಚಿತ್ರಗಳು ?

ಉತ್ತರ : ನನಗೆ ಮೆಚ್ಚುಗೆಯಾಗಿರುವ ಅವರ ಎರಡು ಚಿತ್ರಗಳೆಂದರೆ 'ಏಕ್ ದಿನ್ ಪ್ರತಿ ದಿನ್' ಮತ್ತು 'ಆಕಲೇಕರ್ ಸಂಧಾನೆ,' ನಿಜವಾಗಿ ನಾನು 'ಏಕ್‌ದಿನ್ ಪ್ರತಿದಿನ್' ನೋಡಿದಾಗ ಮೃಣಾಳ್ ಅವರಿಗೆ ಹೇಳಿದೆ : "ಇದು ನೀವು ಕಾರ್ಮಿಕ ವರ್ಗದ ಕ್ರಾಂತಿಕಾರಿಯಲ್ಲವೆಂದು, ಕೇವಲ ಮಧ್ಯಮ ವರ್ಗದ ತಂದೆ ಎಂಬುದನ್ನು ತೋರಿಸುತ್ತದೆ. ಮಧ್ಯಮ ವರ್ಗದ ಒಬ್ಬ ತಂದೆಯಾಗಿ ನೀವು ಹೆಚ್ಚು ಪರಿಣಾಮ ಕಾರಿಯಾಗಿದ್ದೀರಿ."

ಪ್ರಶ್ನೆ : ತುಂಬಾ ಮಹತ್ತ್ವದ ಸಂಗತಿಯೆಂದರೆ ನೀವು ಆಫ್ರಿಕಾ ಮತ್ತು ಭಾರ ತೀಯ ಸಿನಿಮಾಗಳನ್ನು ಒಂದಕ್ಕೊಂದು ಹೋಲಿಸಿ ನೋಡಿದರೆ, ಆಫ್ರಿಕಾ ಸಿನಿಮಾಗಳಲ್ಲಿ ಅನೇಕ ಅತಿರೇಕಗಳನ್ನು ಕಂಡರೂ ಪರಿಸ್ಥಿತಿಯಿಂದ ಹೊರ ಬರುವ ಸ್ವಲ್ಪ ಪ್ರಯತ್ನ, ಪರಿಸ್ಥಿತಿಯನ್ನು ಕುರಿತ ವಿವರಣೆ ಇದನ್ನು ಕಾಣು ತ್ತೀರಿ. ಆದರೆ ಭಾರತದಲ್ಲಿ ಹೀಗಿಲ್ಲ.

ಉತ್ತರ : 1960ರ ದಶಕದಲ್ಲಿ ಭಾರತವರ್ಷದ ಅತ್ಯಂತ ಪ್ರಬಲವಾದ ಹೊಸ ಅಲೆ ಆಂದೋಲನ ನಡೆದದ್ದು ಕರ್ನಾಟಕದಲ್ಲಿ. ನಾನು ಉಲ್ಲೇಖಿಸಿದ ಕನ್ನಡ ಚಲನ ಚಿತ್ರಗಳಿಂದಾಗಿ, ಏಕೆಂದರೆ ಅಲ್ಲಿ ಹೊಡೆದಾಡಲು ಯಾವ ವಿಧವಾದ ವ್ಯವಸ್ಥೆಯೂ ಇರಲಿಲ್ಲ. ಅಲ್ಲಿ ಕನ್ನಡ ಚಲನಚಿತ್ರೋದ್ಯಮವೇ ಇರಲಿಲ್ಲ, ಅಲ್ಲಿ ಕೆಲವು ದೊಡ್ಡ ಸಿನಿಮಾಗಳನ್ನು ತಯಾರಿಸಲಾಗುತ್ತಿದ್ದು, ಪ್ರತಿ ವರ್ಷ 25 ಚಿತ್ರಗಳು ಸಿದ್ಧಗೊಳ್ಳು ತ್ತಿದ್ದವು. ಇಂದು ಅದೇ ಬಗೆಯ ಸಣ್ಣ ಬಜೆಟ್, ಸಿನಿಮಾವನ್ನು ಮಾಡಲಾಗು ವುದಿಲ್ಲ. ಏಕೆಂದರೆ ಕರ್ನಾಟಕದಲ್ಲಿ ಪ್ರತಿ ವರ್ಷ 70 ಚಿತ್ರಗಳು ತಯಾರಾಗುತ್ತವೆ. ಅದು ಅಲ್ಲಿ ಸ್ಥಾಪನೆಗೊಂಡಿದೆ, ಅಲ್ಲಿ ಹಣವಿದೆ.

ಪ್ರಶ್ನೆ : ಪ್ರೇಕ್ಷಕರ ಮೇಲೆ ಚಿತ್ರಗಳ ಪ್ರಭಾವವಿದೆ ಎಂಬುದನ್ನು ನೀವು ನಂಬು ತ್ತೀರಾ ?

ಉತ್ತರ : ಹೌದು. ಯಾರೂ ಅದನ್ನು ನಿರಾಕರಿಸಲಾಗದು. ಉದಾಹರಣೆಗೆ ಭಾರತೀಯ ಸಿನಿಮಾದ ಮೇಲೆ ಸತ್ಯಜಿತ್‌ರೇ ಅವರ ಪ್ರಭಾವವಿದೆ. ಹಿಂದಿ ಸಂದರ್ಭದಲ್ಲೂ ಸಹ ಈಚೆಗೆ ಶ್ಯಾಂ ಬೆನೆಗಲ್ ಅವರ ಪ್ರಭಾವವಿದೆ ಎನ್ನುವುದನ್ನು ನಿರಾಕರಿಸಲಾಗದು. ಅಥವಾ ಬಸು ಚಟರ್ಜಿ ಯಾವುದಾದರೂ ಕ್ರಿಯೆ ನಡೆದಾಗ ಅದು ಏಕೆ ಸಂಭವಿಸಿತೆಂದು ಜನ ತಿಳಿಯಬಯಸುತ್ತಾರೆ. ಕನ್ನಡ ಸಿನಿಮಾದಲ್ಲಿ ಕಾರಂತ ಮತ್ತು ನಾನು ಪ್ರಭಾವ ಬೀರಿದೆವು, ನಾವು ಪರಿಸ್ಥಿತಿಯನ್ನು ಬದಲಾಯಿ ಸಿದೆವು. ಅದು ಒಳ್ಳೆಯದೇ ಇರಬಹುದು, ಕೆಟ್ಟದೇ ಇರಬಹುದು, ನಿಮಗೆ ಹೇಗೆ ನ್ನಿಸಿದರೆ ಹಾಗೆ. ಚಲನಚಿತ್ರ ಎಷ್ಟೊಂದು ದುಬಾರಿಯಾದ ಮಾಧ್ಯಮವೆಂದರೆ, ಅದು ತನ್ನ ಹಣವನ್ನು ಮತ್ತೆ ಸಂಪಾದಿಸಲೇಬೇಕು. ಅದು ಸಾಧ್ಯವಾಗದಿದ್ದರೆ ಯಾವ ಪ್ರಭಾವವನ್ನೂ ಬೀರುವುದಿಲ್ಲ. ಯಾರೂ ಅದನ್ನು ನೋಡಿಲ್ಲ, ವಿಫಲ ಗೊಂಡ ಚಿತ್ರದ ಬಗ್ಗೆ ಯಾರೂ ಮಾತನಾಡುವುದಿಲ್ಲ. ಒಂದು ಚಲನಚಿತ್ರ ಯಶಸ್ವಿ ಯಾದರೆ ಅದು ಏಕೆ ಯಶಸ್ವಿಯಾಯಿತೆಂದು ತಿಳಿಯಲು ಎಲ್ಲರೂ ಬಯಸುತ್ತಾರೆ. ಅದು ಸಣ್ಣ ಪ್ರಮಾಣದಲ್ಲಿ ಯಶಸ್ವಿಯಾಗಿರಬಹುದು ಎನ್ನುವುದು ಪರಿಸ್ಥಿತಿಯನ್ನು ಬದಲಾಯಿಸುವುದಿಲ್ಲ. ಫ್ರಾನ್ಸ್‌ನ ಹೊಸ ಅಲೆಯಲ್ಲೂ ಸಹ ಗೊಡಾರ್ಡ್ ಮತ್ತು ಟ್ರುಫ್‌ಟ್‌ರ ಮೊದಲ ಚಿತ್ರಗಳು ಯಶಸ್ವಿಯಾಗದೆ ಹೋಗಿದ್ದಿದ್ದರೆ ಇಡೀ ಹೊಸ ಅಲೆ ಸತ್ತು ಹೋಗುತ್ತಿತ್ತು.

ನೀವು ಸಿನಿಮಾವನ್ನು ಎಂಟು ದಿನಗಳಕಾಲ ನೋಡಲಾಗದು, ಎರಡು ಗಂಟೆ ಇಪ್ಪತ್ತು ನಿಮಿಷಗಳಲ್ಲಿ ಅಥವಾ ಮೂರು ಗಂಟೆಗಳಲ್ಲಿ ನಿಮಗೆ ಹೇಳಬೇಕೆನ್ನಿಸಿದ್ದನ್ನೆಲ್ಲ ಹೇಳಿ ಬಿಡಬೇಕು. ಇದಕ್ಕೆ ಒಂದು ಚೌಕಟ್ಟು ಅಗತ್ಯವಾಗುತ್ತದೆ. ಇದು ನಾಟಕಕ್ಕೂ

ಅಸ್ವಯ. ನಿಜಾಂಶವೆಂದರೆ ಮನುಷ್ಯನ ತಳ ಕೋಮಲವಾದ್ದು: ಅದರ ಮೇಲೆ ಕೂರುವುದರಿಂದ ಅವನು ಆಯಾಸಗೊಳ್ಳುತ್ತಾನೆ. ಆದ್ದರಿಂದ ಪ್ರತಿಯೊಂದು ಸೆಕೆಂಡು, ಪ್ರತಿ ನಿಮಿಷ ಮುಖ್ಯ. ಚೌಕಟ್ಟು ಎಂದರೇನು? ಬೇರೆ ಬೇರೆ ಸನ್ನಿವೇಷಗಳನ್ನು ವ್ಯವಸ್ಥಿತ ರೀತಿಯಲ್ಲಿ ಸಂಘಟಿಸಬೇಕಾದರೆ ನೀವು ಪ್ರತಿಯೊಂದು ಕ್ಷಣವನ್ನು ಬಳಸಿಕೊಳ್ಳಬೇಕು. ಅದು ಒಂದು ಕಟ್ಟಡದಂತಿರಬೇಕು. ಒಂದು ಕಂಬವನ್ನು ತೆಗೆದರೂ ಇಡೀಕಟ್ಟಡ ಕುಸಿಯಬಹುದು. ಒಂದು ಕಾಂದಬರಿಗೆ ಒಂದು ಚೌಕಟ್ಟು ಅಗತ್ಯವಿದೆಯೋ ಇಲ್ಲವೋ ಎಂಬ ಬಗ್ಗೆ ದೊಡ್ಡ ವಿವಾದಗಳೆದ್ದಿವೆ. ಆದರೆ ಚಲನಚಿತ್ರದಲ್ಲಿ ಈ ಸ್ವಾತಂತ್ರ್ಯವಿಲ್ಲ. ಭಾರತೀಯ ಚಿತ್ರಗಳಲ್ಲಿ ಅನೇಕವುಗಳಿಗೆ ಇರುವ ಚೌಕಟ್ಟು 20 ಅಥವಾ 30 ವರ್ಷಗಳ ಕೆಳಗೆ ಇಡೀ ರಾತ್ರಿ ನಡೆಯುತ್ತಿದ್ದಂತಹ ರಂಗನಾಟಕಗಳಿಂದ ಬಂದಂಥದ್ದು. ನೀವು ಸಣ್ಣದೊಂದು ಊರಿನಲ್ಲಿ ನಡೆಸಲಾಗುವ ಯಕ್ಷಗಾನವನ್ನೇ ತೆಗೆದುಕೊಳ್ಳಿ. ಒಬ್ಬ ವ್ಯಕ್ತಿ ನೆರೆಯ ಹಳ್ಳಿಯಿಂದ ಗಾಡಿಯಲ್ಲಿ ಅದು ಇದು ತೆಗೆದುಕೊಂಡು ಬರುತ್ತಾನೆ. ಪ್ರದರ್ಶನ ರಾತ್ರಿ 9-30 ಅಥವಾ 10 ಗಂಟೆಗೆ ಪ್ರಾರಂಭವಾಗುತ್ತದೆ. ಅದು 12 ಗಂಟೆಗೆ ಮುಗಿದರೆ ಆ ಮನುಷ್ಯ ಏನು ಮಾಡುತ್ತಾನೆ? ಅವನೆಲ್ಲಿಗೆ ಹೋಗಬೇಕು? ಆದ್ದರಿಂದ ಅದು ಮುಂಜಾನೆ 4 ರವರೆಗೆ ನಡೆಯಲೇಬೇಕು. ರಸ್ತೆಗಳು ಬಿಡುಬೀಸಾಗಿದ್ದು ಬೆಳಗಿನ ಜಾವ ಸೂರ್ಯನ ಬೆಳಕಿದ್ದಾಗ ಅವನು ಮನೆಗೆ ವಾಪಸ್ಸಾಗುತ್ತಾನೆ. ಆದ್ದರಿಂದ ಇಂತಹ ಜಾತ್ರೆಯ ಪ್ರದರ್ಶನಗಳಲ್ಲಿ ಅನೇಕವುಗಳಿಗೆ 8 ಗಂಟೆ ಅವಧಿಯ ಅವಶ್ಯಕತೆಯಿರುತ್ತದೆ. ಹಿಂದಿ ಚಲನಚಿತ್ರ ಆ ಚೌಕಟ್ಟನ್ನು ಪಡೆದುಕೊಂಡಿದೆ. ಅದು ಸಿನಿಮಾ ರೂಪವಲ್ಲ, ಆದ್ದರಿಂದಲೇ ಅನೇಕ ಭಾರತೀಯರು ಹೃದಯದಲ್ಲಿ ನಿಜವಾದ ಹಳ್ಳಿಗರು ಎಂಬು ನಾನು ಹೇಳುವುದು.

ಪ್ರಶ್ನೆ : ನಿಮಗೀಗ ರಂಗಮಂದಿರ ಹಾಗೂ ಸಿನಿಮಾ ಇವೆರಡನ್ನು ಕುರಿತು ಏನನ್ನಿಸುತ್ತದೆ?

ಉತ್ತರ : ಈಗ ರಂಗಭೂಮಿ ಮಾಧ್ಯಮವಲ್ಲ, ನನ್ನ ಮೊದಲ ನಿಷ್ಠೆ ರಂಗಭೂಮಿಗೆ, ಚಿತ್ರ ಜಗತ್ತಿನಲ್ಲಿ ಪ್ರಖ್ಯಾತನಾಗುವುದಕ್ಕಿಂತಲೂ ರಂಗಭೂಮಿಯಲ್ಲಿ ಅಮರನಾಗಲು ಬಯಸುತ್ತೇನೆ.

# ರಾಜಾರಾಮ್ ಮೋಹನ್ ರಾಯ್: ಲಾರ್ಡ್ ಅಮ್ಹೆರ್ಸ್ಟ್‌ನಿಗೆ ಬರೆದ ಪತ್ರದ ಭಾಗಗಳು

ಕಲ್ಕತ್ತೆಯಲ್ಲಿ ನೂತನ ಸಂಸ್ಕೃತ ಪಾಠಶಾಲೆಯ ಸ್ಥಾಪನೆ, ಶಿಕ್ಷಣದ ಮೂಲಕ ಭಾರತವಾಸಿಗಳನ್ನು ಉತ್ತಮಗೊಳಿಸಬೇಕೆಂಬ ಸರ್ಕಾರದ ಮೆಚ್ಚಬಹುದಾದ ಅಭಿಲಾಷೆಯನ್ನು ಎತ್ತಿ ತೋರಿಸುತ್ತದೆ. ಈ ಒಂದು ಕೃಪೆಗೆ ಭಾರತವಾಸಿಗಳು ಚಿರಋಣಿಗಳಾಗಿರಬೇಕು. ಅಷ್ಟೇ ಅಲ್ಲದೆ, ಬುದ್ಧಿಮತ್ತೆಯ ಹರಿವು ನಿರುಪಯುಕ್ತ ಹಾದಿ ಹಿಡಿಯದೆ ಶಿಕ್ಷಣವನ್ನು ಹರಡುವುದಕ್ಕೆ ಬಳಸಬಹುದಾದ ಸಾಮರ್ಥ್ಯ ಅತ್ಯಂತ ಪ್ರಗತಿಶಾಲಿ ನಿಯಮಗಳಿಂದ ನಿಯಂತ್ರಿತ ಹೊಂದಲಿ ಎಂಬುದು ಮಾನವ ಕುಲದ ಒಳಿತನ್ನು ಬಯಸುವ ಪ್ರತಿಯೊಬ್ಬನ ಇಚ್ಛೆಯೂ ಆಗಿರಬೇಕು.

ಶಿಕ್ಷಣ ಕೇಂದ್ರದ ಸ್ಥಾಪನೆಯ ವಿಚಾರ ಮುಂದೆ ಬಂದಾಗ ಇಂಗ್ಲೆಂಡಿನ ಸರ್ಕಾರ ಭಾರತದ ಪ್ರಜೆಗಳ ಶಿಕ್ಷಣಕ್ಕಾಗಿ ದೊಡ್ಡ ಮೊತ್ತವನ್ನು ಮೀಸಲಾಗಿಡಲು

---

ರಾಜಾರಾಮ್ ಮೋಹನ್ ರಾಯ್ ಅವರು 1823ರಲ್ಲಿ ಲಾರ್ಡ್ ಅಮ್ಹೆರ್ಸ್ಟ್‌ನಿಗೆ ಬರೆದ ಪತ್ರದ ಕೆಲವು ಭಾಗಗಳು ಚಾರಿತ್ರಿಕ ಹಿನ್ನೆಲೆಯ ದೃಷ್ಟಿಯಿಂದ ಒಂದು ಮಹತ್ವದ ದಾಖಲು. ಹಾಗೆಯೇ ಆಧುನಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಮೊದಲನೆಯ ಬೇಡಿಕೆ. ಬ್ರಿಟಿಷರು ಸಂಪ್ರದಾಯಿಕ ಶಿಕ್ಷಣಕ್ಕೆ ಬೆಂಬಲಸೂಚಿಸುತ್ತಿದ್ದ ಕಾಲದಲ್ಲಿ 1817ರಲ್ಲಿ ರಾಜಾರಾಮ್ ಮೋಹನ್ ರಾಯ್ ಮತ್ತು ಅವರ ಅಭಿಮಾನಿಗಳು ಹುಟ್ಟುಹಾಕಿದ ಹಿಂದೂ ಮಹಾವಿದ್ಯಾಲಯದ ಬಹುಪಾಲು ವಿದ್ಯಾರ್ಥಿಗಳು ಪಾಶ್ಚಿಮಾತ್ಯ ಸಾಹಿತ್ಯ ಮತ್ತು ವಿಜ್ಞಾನವನ್ನು ಕಲಿಯುವಂತೆ ಆಕರ್ಷಿಸಿತು. ಆದರೆ 1854ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಯಜಮಾನರು ಈ ಹಿಂದೂ ಮಹಾ ವಿದ್ಯಾಲಯವನ್ನು ಪ್ರೆಸಿಡೆನ್ಸಿ ಕಾಲೇಜಾಗಿ ಪರಿವರ್ತಿಸಿದರು. ಇದು ಮುಂದೆ ಭಾರತದಲ್ಲಿ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆಯುವ ಬಹುಮುಖ್ಯ ಶಿಕ್ಷಣ ಸಂಸ್ಥೆಯಾಯಿತು. ಇದನ್ನು ಉಷಾನರಸಿಂಹನ್‌ರವರು ಶೂದ್ರಕ್ಕಾಗಿ ಅನುವಾದಿಸಿಕೊಟ್ಟಿದ್ದಾರೆ.

ನಿರ್ಧರಿಸಿದೆ ಎಂಬುದಾಗಿಯೂ ಈ ಹಣವನ್ನು ಗಣಿತಶಾಸ್ತ್ರ, ಪ್ರಕೃತಿಶಾಸ್ತ್ರ, ರಾಸಾಯನಿಕಶಾಸ್ತ್ರ, ಶರೀರಶಾಸ್ತ್ರ ಮತ್ತಿತರ ಉಪಯುಕ್ತ ವಿಜ್ಞಾನಗಳನ್ನು ತಿಳಿಯಪಡಿಸಬಲ್ಲ ಪ್ರತಿಭಾವಂತ ಶಿಕ್ಷಿತ ಯುರೋಪಿಯನ್ನರನ್ನು ನೇಮಕ ಮಾಡಲು ವ್ಯಯಿಸಬಹುದೆಂದು ತಿಳಿದೆವು. ಈ ವಿಜ್ಞಾನಗಳನ್ನು ಯುರೋಪಿನ ದೇಶಗಳು ಪರಿಪೂರ್ಣಗೊಳಿಸಿರುವುದಲ್ಲದೆ, ವಿಶ್ವದ ಬೇರೆ ಭಾಗಗಳ ನಿವಾಸಿಗಳಿಗಿಂತ ಯುರೋಪಿಯನ್ನರನ್ನು ಅವು ಮೇಲ್ಮಟ್ಟಕ್ಕೆತ್ತಲು ಕಾರಣವಾಗಿವೆ.

ಹೊಸ ಜನಾಂಗಕ್ಕೆ ಇಂತಹ ಜ್ಞಾನದ ಉದಯವಾಗುವುದನ್ನು ಅತ್ಯಾಸಕ್ತಿಯಿಂದ ಎದುರುನೋಡುತ್ತಿದ್ದ ನಮ್ಮ ಹೃದಯಗಳು ಆನಂದ ಹಾಗೂ ಕೃತಜ್ಞತೆಗಳಿಂದ ತುಂಬಿಬಂದವು. ಆಧುನಿಕ ಯೂರೋಪಿನ ವಿಜ್ಞಾನ ಮತ್ತು ಕಲೆಗಳನ್ನು ಏಷ್ಯಾ ಖಂಡಕ್ಕೆ ಹಬ್ಬಿಸುವ ಉಜ್ವಲ ಶ್ರೇಯವನ್ನು ಹೊಂದುವಂತೆ ಅತ್ಯಂತ ಉದಾರಿ ಹಾಗೂ ಪ್ರಗತಿಶೀಲ ಪಾಶ್ಚಿಮಾತ್ಯ ದೇಶವನ್ನು ಪ್ರಚೋದಿಸಿದಕ್ಕಾಗಿ ದೈವಕ್ಕೆ ನಾವಾಗಲೆ ನಮ್ಮ ವಂದನೆಗಳನ್ನು ಸಲ್ಲಿಸಿಯಾಗಿತ್ತು.

ಆದರೆ, ಹಿಂದೂ ಪಂಡಿತರ ನೇತೃತ್ವದಲ್ಲಿ ಸಂಸ್ಕೃತಿ ಶಾಲೆಯೊಂದನ್ನು ಸರ್ಕಾರ ಸ್ಥಾಪಿಸಲಿರುವುದೆಂದು ಈಗ ನಮಗೆ ತಿಳಿದು ಬಂದಿದೆ. ಭಾರತದಲ್ಲಿ ಈಗಾಗಲೆ ವ್ಯಾಪಕವಾಗಿರುವ ಜ್ಞಾನವನ್ನಲ್ಲದೆ ಬೇರೇನನ್ನು ಅದು ನೀಡಲಾರದು. (ಲಾರ್ಡ್‌ಬೇಕನ್ನರಿಗಿಂತ ಮೊದಲು ಇಂತಹ ಶಾಲೆಗಳು ಯೂರೋಪಿನಲ್ಲಿ ಇದ್ದವು.) ಸಮಾಜಕ್ಕಾಗಲಿ, ಅದನ್ನು ಪಡೆದವನಿಗಾಗಲಿ, ತೀರ ಕಡಿಮೆ ಅಥವಾ ಏನೂ ಉಪಯುಕ್ತತೆಯಿಲ್ಲದ ದಾರ್ಶನಿಕ ವ್ಯತ್ಯಾಸಗಳ ಜ್ಞಾನವನ್ನು ಹಾಗೂ ಭಾಷಾಶಾಸ್ತ್ರದ ಕೌಶಲ್ಯವನ್ನು ಎಳೆಯರ ಮನೆಗಳಲ್ಲಿ ತುಂಬುವುದಕ್ಕಿಂತ ಹೆಚ್ಚಿನನ್ನು ಈ ವಿದ್ಯಾಭ್ಯಾಸ ಮಾಡದು. ಎರಡು ಸಾವಿರ ವರ್ಷಗಳ ಹಿಂದೆ ಏನು ತಿಳಿದಿತ್ತೋ ಮತ್ತು ಅನಂತರ ಕಲ್ಪನಾ ಲೋಕವಲ್ಲಿ ವಿಹರಿಸುವ ವ್ಯಕ್ತಿಗಳು ಉಂಟುಮಾಡಿದ ಕೆಲಸಕ್ಕೆ ಬಾರದ, ಹುರುಳಿಲ್ಲದ ಸೂಕ್ಷ್ಮತೆಗಳನ್ನು ವಿದ್ಯಾರ್ಥಿಗಳು ಅಂತಹ ಶಾಲೆಯಲ್ಲಿ ಪಡೆಯಬಲ್ಲರು. ಭಾರತದ ಎಲ್ಲಾ ಭಾಗಗಳಲ್ಲೂ ಇಂತಹ ಶಿಕ್ಷಣ ನೀಡಲಾಗುತ್ತಿದೆ...

ಇಂಗ್ಲೆಂಡಿನ ಸರ್ಕಾರ ಭಾರತೀಯ ಪ್ರಜೆಗಳ ಸುಧಾರಣೆಯ ದೃಷ್ಟಿಯಿಂದ ಅವರ ಶಿಕ್ಷಣಕ್ಕಾಗಿ ಹಣ ಮೀಸಲಾಗಿಟ್ಟಿರುವುದರಿಂದ, ನಾನು ಈ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಲಿಚ್ಛಿಸುತ್ತೇನೆ. ತಮ್ಮ ಉನ್ನತ ಸ್ಥಾನಕ್ಕೆ ಸಲ್ಲಬೇಕಾದ ಮರ್ಯಾದೆಯನ್ನು ನೀಡುತ್ತಾ, ತಾವು ಅನುಮತಿ ನೀಡಿದಲ್ಲಿ ನಾನು ಹೇಳುವುದೇನೆಂದರೆ, ಈಗ ನೀವು ಒಪ್ಪಿರುವ ಯೋಜನೆ ಜಾರೀಗೊಳಿಸಿದ್ದೇ ಆದರೆ, ತಮ್ಮ ಉದ್ದೇಶಗಳು ಪೂರ್ಣವಾಗಿ ಸೋಲುತ್ತವೆ; ಏಕೆಂದರೆ, ಸಾಂಸ್ಕೃತ ವ್ಯಾಕರ್ಣದ ಸೂಕ್ಷ್ಮತೆಗಳನ್ನು ಗಳಿಸಿಕೊಳ್ಳುವುದರಲ್ಲಿ ನಮ್ಮ ಎಳೆಯರು ತಮ್ಮ ಜೀವನದ ಅತ್ಯ

ಮೂಲ್ಯ ಅವಧಿಯ 12ವರ್ಷಗಳನ್ನು ಕಳೆಯುವಂತೆ ಮಾಡಿದಲ್ಲಿ ಯಾವ ಸುಧಾರಣೆಯನ್ನೂ ಎದುರು ನೋಡುವುದಸಾಧ್ಯ...

ಈ ಮೇಲೆ ವಿವರಿಸಲ್ಪಟ್ಟ ಕಾಲ್ಪನಿಕ ಶಿಕ್ಷಣಕ್ಕೆ ಉತ್ತೇಜನ ನೀಡಿದಲ್ಲಿ ಉಂಟಾಗುವ ಪರಿಣಾಮವನ್ನು ತಾವು ಕಾಣುವಂತಾಗಲು ಯುರೋಪಿನಲ್ಲಿ ವಿಜ್ಞಾನ ಮತ್ತು ಸಾಹಿತ್ಯಗಳ ಸ್ಥಿತಿ ಲಾರ್ಡ್‌ಬೇಕನ್ನರಿಗೆ ಮೊದಲು ಮತ್ತು ನಂತರ ಹೇಗಿತ್ತೆಂಬುದನ್ನು ಹೋಲಿಸಿ ನೋಡಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಬ್ರಿಟಿಷ್ ರಾಷ್ಟ್ರವನ್ನು ನೈಜ ಜ್ಞಾನದಿಂದ ಹೊರಗೆ, ಅಜ್ಞಾನದಲ್ಲಿ ಉಳಿಸಬೇಕೆಂಬ ಉದ್ದೇಶವಿದ್ದದ್ದೇ ಆದರೆ, ಅಜ್ಞಾನವನ್ನು ಮುಂದುವರೆಸುವುದಕ್ಕಾಗಿಯೇ ಇದ್ದ ಶಿಕ್ಷಣ ವ್ಯವಸ್ಥೆಗೆ ಬದಲಾಗಿ ಬೇಕನ್ನದ ದರ್ಶನಶಾಸ್ತ್ರವನ್ನು ಜಾರಿಗೊಳಿಸುತ್ತಿರಲಿಲ್ಲ. ಅದೇರೀತಿ, ಬ್ರಿಟಿಷ್ ವಿಧಾನಸಭೆಯ ಉದ್ದೇಶ ಭಾರತವನ್ನು ಕತ್ತಲಲ್ಲಿಯೇ ಉಳಿಸಬೇಕೆಂಬುದಾದರೆ, ಸಂಸ್ಕೃತ ಶಿಕ್ಷಣ ವ್ಯವಸ್ಥೆ ಅತ್ಯಂತ ಸೂಕ್ತವಾದುದಾಗಿದೆ. ಪ್ರಜೆಗಳ ಸುಧಾರಣೆ ಸರ್ಕಾರದ ಉದ್ದೇಶವಾಗಿರುವುದರಿಂದ ಗಣಿತಶಾಸ್ತ್ರ, ಪ್ರಕೃತಿಶಾಸ್ತ್ರ, ರಾಸಾಯನಿಕಶಾಸ್ತ್ರ, ಶರೀರಶಾಸ್ತ್ರ ಮತ್ತಿತ್ತರ ಉಪಯುಕ್ತ ವಿಜ್ಞಾನಗಳನ್ನು ಒಳಗೊಂಡಂತಹ ಶಿಕ್ಷಣ ಪದ್ಧತಿಗೆ ಉತ್ತೇಜನ ನೀಡಲಾಗುತ್ತದೆಂದು ಆಶಿಸುತ್ತೇವೆ. ಯುರೋಪಿನಲ್ಲಿ ವಿದ್ಯಾಭ್ಯಾಸ ಪಡೆದ, ಹಲವು ಪ್ರತಿಭಾವಂತ ಹಾಗೂ ಪಾಂಡಿತ್ಯಪೂರ್ಣ ಗಣ್ಯರನ್ನು ನೇಮಕಗೊಳಿಸಿ. ಅಗತ್ಯವಿರುವ ಪುಸ್ತಕಗಳು ಹಾಗೂ ಶಿಕ್ಷಣ ಸಾಮಗ್ರಿಗಳನ್ನೊಳಗೊಂಡ ಕಾಲೇಜುಗಳನ್ನು ತೆರೆಯುವರೆಂದು ಆಶಿಸುತ್ತೇವೆ.

ಪ್ರಭುಗಳಾದ ತಮ್ಮ ಸನ್ನಿಧಿಗೆ ಈ ವಿಷಯವನ್ನು ಒಪ್ಪಿಸುವುದು ನಾನು ನನ್ನ ದೇಶದ ಪ್ರಜೆಗಳಿಗೂ ಹಾಗೂ ಅವರನ್ನು ಉತ್ತಮಗೊಳಿಸಬೇಕೆಂಬ ಆಕಾಂಕ್ಷೆಯಿಂದ ತಮ್ಮ ಪರೋಪಕಾರಿ ಪಾಲನೆಯನ್ನು ಈ ದೂರದ ನಾಡಿಗೆ ವಿಸ್ತರಿಸುತ್ತಿರುವ ಸಾರ್ವಭೌಮರಿಗೂ ವಿಧಾನಸಭೆಗೂ ಸಲ್ಲಿಸಬೇಕಾದ ಪರಮಕರ್ತವ್ಯವೆಂದು ತಿಳಿಯುತ್ತೇನೆ. ಆದ್ದರಿಂದ, ನಾನು ತೆಗೆದುಕೊಂಡಿರುವ ಸ್ವಾತಂತ್ರ್ಯವನ್ನು ಮನ್ನಿಸಬೇಕೆಂದು ವಿನಯಪೂರ್ವಕವಾಗಿ ಬೇಡುತ್ತೇನೆ.

ಕಲ್ಕತ್ತ
11ಡಿಸೆಂಬರ್ 1823

ನಿಮ್ಮವ ಇತ್ಯಾದಿ,
ರಾಮ್ ಮೋಹನ್‌ರಾಯ್

ತಿಂಗಳ ಕಾವ್ಯ

## ನೀನು ಸಿಗುತ್ತಿ....

ನನ್ನ ಏಕಾಂತದಲಿ ಬಿಸಿಲು
ಕತ್ತಲೆಯಿಂದ ಬದುಕು.
ಹೆಣಿಕೆ ಹಾಕುತ್ತಿದ್ದಂತೆ ನನ್ನ
ಮೈಯಲ್ಲಿ ನಿನ್ನ ಬಚ್ಚಿಡಬಯ
ಸುತ್ತೇನೆ. ಉಸಿರು ಅಪ್ಪುಗೆಯಿಂದ
ಮುತ್ತುಗಳು ಝಲ್ಲರಿ ನಿನ್ನ
ಮೈತುಂಬ ಹರಡುವಾಸೆ
ಗೆಳೆಯ ;
ನೀನು ಝಗಝಗಿಸುವ ನಿಯಾನ್
ಬೆಳಕಿನಲಿ ಮಂಕಾಗಿ, ವಿವಿಧ
ಜಾಹಿರಾತುಗಳ ಒಣನಗೆಯಂಚಿನಲಿ
ಕೆಸರು ಕೊಚ್ಚೆ, ಸಾಫು ಸಿಮೆಂಟು
ರೋಡು, ನಗೆ, ಸಿಟ್ಟು, ಮಾತು
ನೋಟ ತುಂಬಿದ ಹಲವರೊಡನೆ
ಕಲಬೆರಕೆಯಾಗಿ, ಮಿಾಟಿಂಗು
ಗಳಲಿ, ಸಭೆ ಸಮಾರಂಭಗಳಲಿ
ಹಳೆ ಹೊಸ ಮುಖಗಳೊಡನೆ
ಕಲಸು ಮೇಲೋಗರವಾಗಿ ಸಿಗುತ್ತಿ...
ಎಲ್ಲೆಲ್ಲೋ ಯಾರ್‍ಯಾರ ಬಳಿಯೋ
ನೀ ಹೇಳ ಹೆಸರಿಲ್ಲ ದೇಸುರಿವ
ಮಳೆಯಾಗಿ, ಮಂಜುಗಡ್ಡೆಯಾಗಿ,
ಆಗ ನಾ ಬಿಸಿಲಿಗೆ ಕರಗಿ ಹರಿಯುವ
ರಸ್ತೆ ಡಾಂಬರಿನಲ್ಲಿ ಸಿಗುವ ಹುಳು !
ಗೆಳೆಯ ;

ನಿರೀಕ್ಷೆ ಮಾಡೋಣ. ರಾಜಕುಮಾರಿ
ರಾಕ್ಷಸನ ಬಂಧನದಿಂದ ತಪ್ಪಿಸಿ
ಕೊಳ್ಳುವುದು, ಏಳು ಸುತ್ತಿನ
ಕೋಟೆಯಲ್ಲಿಯ ಮರದೊಳಿರುವ
ಹಕ್ಕಿ ಹಾರುವದೆಂದು—
ಆಸೆ ಬಿಸಿಲ್ಗುದುರೆಯಾಗಿ ಮುಂದೆ
ಮುಂದೆ ಸರಿಯುತ್ತ, ಎದೆಯ
ಏಕಾಂತದಲ್ಲಿ ಉಳಿದು ಬಿಡುವೆವು
ಒಬ್ಬರನ್ನೊಬ್ಬರು ಬಿಡಿಸುವ
ಕನಸು ಕಾಣುತ್ತ....,

—ಎಚ್. ಎಸ್. ಮುಕ್ತಾಯಕ್ಕ

## ಒಂದು ಸ್ವಗತ

ಋತುಮಾನಗಳ ಬದಲನ್ನೂ
ಗೊಣಗದೇ ಎದುರಿಸಬಲ್ಲ
ನಿನ್ನ ಧೃಡತೆಯನ್ನು ಕಂಡರೆ
ನನಗೊಂದು ರೀತಿಯ ಅಸೂಯೆ
ಎಂದಾ ನನ್ನ ಗೆಳೆಯ

ಆದರೆ;

ಕೂಡಿಟ್ಟ ಪ್ರೀತಿಗೊಂದು
ಕೋಡಿ ಕಾಣಲಾಗದೆ
ಕಣ್ಣು ಹೊಳಪುಗೊಳ್ಳಲಾಗದೆ
ಹೊಳಪಿನ ಕಣ್ಣ ಹುಡುಕುವ
ಕರಗುವ ಕ್ಷಣಗಳ ಎಣಿಕೆಯಲ್ಲಿ
ಕರುಕಾಗುತ್ತಿರುವ
ಬಿಚ್ಚಿಡದಿದ್ದರೂ ಬಯಲಾಗಲು ಇಣುಕುತ್ತಿರುವ

ಬರಿಯ ದೃಢತೆಯ ಮೇಲ್ಪದರವನ್ನು
ಹರಿದೊಗೆಯಲೋ

ಅಥವಾ

ಕಣ್ಪಟ್ಟಿಯ ಒಳಗೊಳಗೇ ತಳಮಳಿಸುತ್ತಾ
ಆದರ್ಶದ ಬಲಊನಿನೊಟ್ಟಿಗೆ
ಕಾಡ್ಗಿಚ್ಚಿಗೆ ಬಲಿಯಾದ
ಅಂಧರಾಜನ ಅರ್ಧಾಂಗಿಯ
ಸರತಿಯ ಸಾಲು ಹಿಡಿಯಲೋ

—ಯಾದವಿ

## ತಾಬ್ರೀಜ್‌ನ ಸೂರ್ಯ

ಮರಕ್ಕೆ ಕಾಲೋ ರೆಕ್ಕೆಯೋ ಇದ್ದಿದ್ದರೆ
ಅದಕ್ಕೆ ಆಗುತ್ತಿರಲಿಲ್ಲ ಗರಗಸದ ನೋವು
ಅಥವಾ ತಾಕುತ್ತಿರಲಿಲ್ಲ ಕೊಡಲಿಯೇಟು
ಸೂರ್ಯನಿಗೆ ಕಾಲೋ ರೆಕ್ಕೆಯೋ ಇಲ್ಲದಿದ್ದರೆ ಪ್ರತಿರಾತ್ರಿ
ಹೇಗೆ ಈಗ ಬೆಳಗುತ್ತಿತ್ತು ಪ್ರತಿ ಬೆಳಗು
ಕಡಲುಪ್ಪು ನೀರು ಕಡಲಿರದ ಮೇಲೆ ಗಗನಕ್ಕೆ ಹೋಗದಿದ್ದರೆ
ಹೇಗೆ ತೋಟಗಳಿಗೆ ಜೀವ ತುಂಬುತ್ತಿತ್ತು ನದ್ವಿನೀರು ಮಳೆನೀರು
ಹನಿ ತನ್ನ ತವರು ಮನೆಬಿಟ್ಟು ಮರಳಿದರೆ
ತೆರೆದಿರುವ ಚಿಪ್ಪೊಳಗೆ ಮುತ್ತಾಗುತ್ತದೆ.
ಹೋಗಲಿಲ್ಲವೆ ಯುಸೋಫ಼ ತನ್ನ ತಂದೆಯ ಬಿಟ್ಟು ಗೋಗರೆಯುತ್ತ
ಪಡೆಯಲಿಲ್ಲವೆ ಕೊನೆಗೆ ಐಶ್ವರ್ಯ ಸಾಮ್ರಾಜ್ಯ ವಿಜಯ
ಮುಸ್ತಾಫ಼ ಯಾತ್ರೆ ಹೊರಡಲಿಲ್ಲವೆ ಮದೀನಾ ಕಡೆಗೆ
ಒಡೆತನವ ಪಡೆಮ ಆಳಲಿಲ್ಲವೆ ನೂರುನಾಡುಗಳನ್ನು
ನಿನಗೋ ಪಾದಗಳಿಲ್ಲ; ನಿನ್ನೊಳಗೆ ಯಾನ ಹೊರಡು
ಹವಳ ಗಣಿಗಳ ಮೇಲಿನ ಹಾಗೆ ನಿನ್ನ ಮೇಲೆ ಕಿರಣ ಗುರುತು

ಓ ಗುರುವೆ ಸಯದಿಂದ ಸಯಕ್ಕೆ ಯಾನವ ಮಾಡು
ಇಂಥ ಯಾನದ ಬಳಿಕ ನೆಲವೆಲ್ಲ ಹೊನ್ನ ಗಣಿಯಾಗುವುದು
ಹುಳಿಯಿಂದ ಕಹಿಯಿಂದ ಮುನ್ನುಗ್ಗಿ ಸಿಹಿಯ ಕಡೆ
ಉಪ್ಪು ನೆಲ ಎದೆಬಗೆದು ನೂರಾರು ಹಣ್ಣುಗಳು ಚಿಮ್ಮುದಂತೆ
ತಾಬ್ರೀಜ್‌ನ ವೈಭವವೆ ನೋಡು ಸೂರ್ಯ ಪವಾಡಗಳನ್ನು
ಪ್ರತಿಮರಕ್ಕೂ ಅಂಥ ಸೂರ್ಯಕಿರಣಗಳಿಂದ.

ಪರ್ಷಿಯನ್ ಮೂಲ : ಜಲಾಲುದ್ದೀನ್ ರೂಮಿ

**ಕನ್ನಡಕ್ಕೆ : ಎಚ್. ಎಸ್. ಶಿವಪ್ರಕಾಶ್**

## ಪ್ರತಿಹಾಸ ಪ್ರತಿಮೆ

ದೇಹ ಕಿತ್ತು ಹೊರ ಹೋಗಬೇಕು ಆ ಕ್ಷಿತಿಜ ಮರದ ತುದಿಗೆ
ಈರೇಳು ವರುಷ ತಾರಾಡಿ ಬರುವ ಸುಖ ದುಃಖ ಪವನದೆಡೆಗೆ
ಮೃತನ ಧೃಡದಿಂದ ತನುವ ತಳೆದ ಆಕಾಶ ನೆತ್ತಿ ನೆಲೆಗೆ
ನೈರಾಶ್ಯ ಬಳ್ಳಿಯೂ ಬಿಡುವ ಹೂವ ಪರಿಮಳದ ಪಕ್ವನಿಧಿಗೆ

ನಡಿಗೆ ನಿಶ್ಚಯದ ಸಿಡಿಲುಗುದುರೆ ಮೇಲೇರಿ ಮಳೆಯಪೋರಿ
ಮುಖಕೆ ರಾಚಿ ಮಯ್ಯನ್ನೆ ಹೀಚಿ ಚಳಿ ಸವತಿ ಗಂಡು ಬೀರಿ
ಅವಳ ಬೆನ್ನಿಗೆ ಚಿಗುರು ಹೂವ ಕೂಜನ ವಸಂತ ನಾರಿ
ಅನುರಾಗವೆಸೆದು ಬನಮಲೆಗಳಲ್ಲಿ ಮಿಡಿಹೂವು ಮೇಲೆಯ ತೋರಿ

ತ್ವರೆ ಮಾಡಿಕರೆವ ನವಯುಗವ ಹೆರುವ ಋತುಮಾನ ಋತುಗಳಲ್ಲಿ
ಹಳತಾಗದಿರವ ಹೊಸತಾಗಿ ನೆರೆವ ಪ್ರತಿಹಾಸ ಪ್ರತಿಮೆಯುರಳಿ
ಒಂದಾಗ ಬೇಕು ಚೆಂದಾಗ ಬೇಕು ಪರಿಪೂರ್ಣ ನೃತ್ಯ ಸರಸಿ
ಜಲಕುಮಾರಿಯರೆ, ನನ್ನ ತಾರೆಯರೆ ಕತೆಯನೊರೆಯಿರವ್ವ
ಎದೆಯ ಜೋಳಿಗೆಗೆ ಗಟ್ಟಿಕಾಳುಗಳ ಭರ್ತಿಮಾಡ ಬನ್ನಿ
ಚಿತ್ರಗನ್ನಡಿಯ ಬೆಳ್ಳಿ ಬೆಳಕೊಳಿಂಬಾಗಿ ಜಳಕವಾಡಿ

ವೀಚಿ

# ನಿದ್ದೆಗಣ್ಣಿನ ಬಣ್ಣ

ಒಂದು :

ಸಂಜೆಗತ್ತಿದ ಗತ್ತಿನ ನಿಯಾನ್ ದೀಪಗಳ
ಜಗಜಗಿಸುವ ಬೆಳಕಲ್ಲಿ ಸೂರ್ಯತಪ್ಪಿಸಿಕೊಂಡ ಕಂಡೆಯಾ
ನೆಲ ಮುಗಿಲು ಒಂದಾದ ಬಿಂದು
ಮರೀಚಿಕೆಯ ಬೆಂಬೆತ್ತಿ ಪಯಣದ ಕಥೆ
ಕಥೆಯಭ್ರಮೆ ಬಯಲಾಯ್ತು ಬಿಡು
ಬಯಲಲ್ಲಿ ಹೂಡಿ ಬಿಡಾರ
ಮೂಡು ದೀಘ್ರನಿದ್ರೆ
ಜಗದ ಜಂಜಡಗಳ ಮರೆತು
ಹಾಯಾಗಿ ಕಣ್ಮುಚ್ಚು

ಸತ್ಯದ ಬೆನ್ನಟ್ಟಿಹೋದ ಕೊಲಂಬಸನಂತೆ
ದಿನ ದಿನದ ದಿನಚರಿಯಿದು
ನಿಜ ನಿಜವಾಗಲು ಬಿಡದೇ
ಹಠ ತೊಟ್ಟ ಗೂಬೆಲ್ಸನ ನಾವೆ
ಅಂತರಂಗದೊಳ ಸಾಗರ ತೀರಕೆ
ಮೌನದ ಬಂಡೆಗೆ ತಾಕಿ ಚೂರು ಚೂರು

ಎರಡು :

ಬಾನು ಭೂಮಿ ಒಂದಾದರೆಂಬ ತೀರಕೆ
ಕಿತ್ತು ಕಿತ್ತು ಹೆಚ್ಚೆ ಸಾಗುವ ನವುಗೆ
ನೆಲದ ಧೂಳು ರಕ್ತದುಂಡೆಯಾಗುವ ನೋವು
ನಮ್ಮ ಕಡೆ ತೂರುವ
ನನ್ನ ನಿನ್ನವರೆಂಬವರ ಕಿಸುರುಗಣ್ಣಿನ
ಕಸುವು ನೋಡು
ಕಾವುಕಣ್ಣಿನ ಪಿಸುರು ಮುಸರೆ
ನೋಡಿ ನನ್ನ ನಾಡಿ
ಮಯ್ಯೆಲ್ಲ ಮಿಡುಕುತಿವೆ ರಕ್ತ ರಕ್ತಕ್ಕೊ ಒಂದೊಂದಾಗಿ

ಮೂರು :

ಮನದ ಜೋಳಿಗೆಯಲಿ ಬುತ್ತಿಕಟ್ಟಿಕೊಂಡ
ಕಾಡಗಿಡದ ತಟ್ಟೆ ಬೆಳೆದ ಬಳ್ಳಿಯಡಿಯೆಲ್ಲೋ ತಾರಿ
ಸಿಡಿದು ಹರಡಿದ್ದ ಗುಲಗಂಜಿ ಕಾಳುಗಳ
ಸುಲಿದು ಒಪ್ಪಮಾಡಬೇಡ
ಕಳಚಿ ಬಿದ್ದೀತು ಮುಗಿಲು
ಹಾಕಿಬಿಡು ಮಣ್ಣಿನೊಡಲಿಗೆ
ಜೀವ ಬರಲಿ ಅದಕೂ

ನಾಲ್ಕು :

ನಿದ್ದೆಗಣ್ಣಿಗೆ ಕಾಣುವ
ಬಣ್ಣ ಯಾವುದು ಹೇಳೆ
ಕಾಡ ಕಣ್ಣಿನ ಪತ್ರ ಬೆರಳಲ್ಲಿ ಹಿಡಿದೆ
ನಿನ್ನ ಹೂಬೆರಳುಗಳ ಹಿಡಿದೆ
ಕರ್ಣಗಳಲ್ಲಿ ಕೊಡಲು ದಾನವೇನಿಲ್ಲ
ಯೋಗಿ ಬಂದರೆ ಹೋಗೆನ್ನು ಮುಂದೆ
ಸುದ್ದಿಯಿಲ್ಲದ ಸಾಗರದಾಚೆ ನೆಲದಿಂದ
ಸದ್ದು ಗದ್ದಲವಾಯ್ತು
ಕಾಳು ಬತ್ತಿ ಕೂಳು ಬೇಡುವ ಕೈಗಳು
ಹೆಡೆಯೆತ್ತಿವೆ ನೋಡು
ದಂಡು ಬರುತಿವೆ ಕಣ್ಣುಬಿಡು
ಇಲ್ಲ, ಹೇಳಿಬಿಡು
ನಿದ್ದೆಗಣ್ಣಿಗೆ ಕಾಣುವ ಬಣ್ಣ ಯಾವುದು

—ಎಲ್ಸಿ. ನಾಗರಾಜು.

# ಚಂದ್ರಶೇಖರ ಪಾಟೀಲರೊಂದಿಗೆ

ಕನ್ನಡ ಕಾವ್ಯ ಪರಂಪರೆಯೊಂದಿಗೆ ನಿಮ್ಮನ್ನು ನೀವು ಹೇಗೆ ಗುರ್ತಿಸಿಕೊಂಡಿದ್ದೀರಿ ?

'ಪರಂಪರೆ' (Tradition) ಎಂಬುದು ಯಾವುದೋ ಒಂದು ಕಾಲ ದೇಶಕ್ಕೆ 'ಬದ್ಧ'ವಾದ ಪರಿಕಲ್ಪನೆಯಾಗಿರದೆ, ಅದೊಂದು ನಿರಂತರ ಪ್ರಕ್ರಿಯೆ ಎಂದು ನಾನು ನಂಬಿರುವುದರಿಂದ ನಾವು ಒಂದಿಲ್ಲೊಂದು ರೀತಿಯಲ್ಲಿ, ಹದದಲ್ಲಿ ಅದರೊಂದಿಗೆ ಜೀವಂತ ಸಂಬಂಧ ಹೊಂದಿರಬೇಕಾದುದು ಅನಿವಾರ್ಯ. ಸಮಕಾಲೀನದ ವಾಸ್ತವವನ್ನು ಅನುಭವಿಸುತ್ತಾ, ಅರಗಿಸಿಕೊಳ್ಳುತ್ತಾ ಇರುತ್ತಲೇ ಸಮಕಾಲೀನವನ್ನು ಮೀರಬಹುದಾದ ಕಾಣ್ಕೆಗಳನ್ನು ಒಳಗೊಳ್ಳುವ ಸತತ ಪ್ರಯತ್ನ ನಾನು ಮಾಡುತ್ತಿರುವೆ—ಬದುಕಿನಲ್ಲಿ, ಸಾಹಿತ್ಯದಲ್ಲಿ ಕನ್ನಡದ ಒಟ್ಟು ಸಾಹಿತ್ಯ ಪರಂಪರೆಯನ್ನು ನನ್ನ ಪ್ರಜ್ಞೆಯ ಹಿನ್ನೆಲೆಯಲ್ಲಿ ಇಟ್ಟುಕೊಂಡೇ ನನ್ನ ಕೆಲಸ ಮಾಡಬೇಕಾಗುತ್ತದೆ. ಆಗಿನ ಹಾಯುವ, ಹಾಯಲೇಬೇಕಾದ, ಸಾಹಿತ್ಯಿಕ ಚಳುವಳಿಗಳು ಪರಂಪರೆಯ ನಿರಂತತೆಯನ್ನು ಕಾಯ್ದುಕೊಳ್ಳಲು ಅನಿವಾರ್ಯವಾಗುತ್ತವೆ.

ನವ್ಯದ ಒಳಗುಂಗಿನಲ್ಲಿ ಕಾವ್ಯ ಬರೆಯಲು ಆರಂಭಿಸಿದ ನೀವು, 70ರ ದಶಕದಿಂದೀಚೆಗೆ ಹೆಚ್ಚು ಸಾಮಾಜಿಕ ಕಾಳಜಿಗಳನ್ನು ಒಳಗೊಂಡು ಬರೆಯುತ್ತಿದ್ದೀರಿ. ಈ ರೀತಿಯ ಕಾವ್ಯದ ಒಳಸತ್ತ್ವದ ಬದಲಾವಣೆಗೆ ನೀವು ಮೈವೊಡ್ಡಿದ್ದು ಹೊರಗಿನ ಒತ್ತಡಗಳಿಂದಲೋ ಅಥವಾ ನಿಮ್ಮೊಳಗಿನ ಎಚ್ಚರದ ಒತ್ತಡಗಳಿಂದಲೋ ?

ನವ್ಯದ ಒಳಗುಂಗು ಅನ್ನುವುದಕ್ಕಿಂತ ನವೋದಯದ ಒಳಗುಂಗು ಅಂದರೆ ಹೆಚ್ಚು ಉಚಿತ. ಆದರೆ ನನ್ನ ಮಟ್ಟಿಗೆ 'ನವೋದಯ,' 'ನವ್ಯ', 'ಬಂಡಾಯ'.... ಇತ್ಯಾದಿಗಳು ಬರೀ ಮೇಲುಪದರಿನ ಲೇಬಲ್ಲುಗಳಾಗಿವೆ ಅನ್ನಿಸುತ್ತದೆ. ಏಕೆಂದರೆ

---

ಚಂದ್ರಶೇಖರ ಪಾಟೀಲರು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮುಖ್ಯ ಕವಿಯಾಗಿ ಮತ್ತು ನಾಟಕಕಾರರಾಗಿ ಪರಿಚಿತರಾಗಿದ್ದಾರೆ. ಇವರೊಡನೆ ಆನಂದಮೂರ್ತಿ ಮತ್ತು ಮಧುಮತಿಯವರು ನಡೆಸಿದ ಸಂದರ್ಶನವನ್ನು ಪ್ರಕಟಿಸುತ್ತಿದ್ದೇವೆ.

'ಬಾನುಲಿ' (೧೯೭೦), 'ಮಧ್ಯಬಿಂದು' (೧೯೭೪), 'ಹತ್ತೊಂಬತ್ತು ಕವನಗಳು' (೧೯೭೭)–ಈ ದಶಕದ ನನ್ನ ಕೃತಿಗಳಲ್ಲಿ ನೀವು 'ಸಾಮಾಜಿಕ' ಅನ್ನಬಹುದಾದ ಅನೇಕ ಕವನಗಳಿವೆ ; ಅದೇ ವ್ಯಂಗ್ಯ ನಿರೂಪಕತೆ ಇದೆ. ೭೦ರ ದಶಕದಿಂದ ಈಚೆಗೆ ಇಂಡಿಯಾದ ಅನೇಕ ಬದಲಾವಣೆಗಳಿಗೆ ನಾನು 'ಕಾವ್ಯಲೋಕ'ವನ್ನು ಮೀರಿ ಪ್ರತಿ ಸ್ಪಂದಿಸತೊಡಗಿದ್ದರಿಂದ ಸಹಜವಾಗಿಯೇ ಸಮಕಾಲೀನ ರಾಜಕೀಯ ನನ್ನ ಕಾವ್ಯದ ಪ್ರಧಾನ ವಸ್ತುವಾಯಿತು. ಒಳಗೇ ಹೊಗೆಯಾಡುತ್ತಿದ್ದ ಕುದಿ ಹೊರಗೆ ಬರುವಂತಾಯಿತು. ಆದ್ದರಿಂದ ಬಾಹ್ಯ ಒತ್ತಡ ಹಾಗು ಒಳಗಿನ ಒತ್ತಡ—ಎರಡರಿಂದಲೂ ೭೦ ರ ದಶಕದ ನನ್ನ ಕಾವ್ಯ ತನ್ನ ಗತಿಯನ್ನು ಪಡೆದುಕೊಂಡಿತು.

ಅಡಿಗರು ನವ್ಯ ಕಾವ್ಯದ ಆಲೋಚನೆಗಳನ್ನು ವಿಸ್ತರಿಸಿ ಮಾರ್ಗ ಕವಿಯಾಗಿರುವಂತೆ, ಬಂಡಾಯ ಕಾವ್ಯದ ಆಲೋಚನೆಗಳನ್ನು ಹೆಚ್ಚು ಸಮರ್ಥವಾಗಿ ವಿಸ್ತರಿಸುತ್ತಿರುವ ಮಾರ್ಗವೊಂದರ ಕವಿಯಾಗುವಂತಹ ಕವಿಗಳು ಯಾರಿದ್ದಾರೆ ?

ಅಡಿಗರು ನೀವು ಹೇಳಿದಂತೆ, ನವ್ಯ ಕಾವ್ಯದ ಆಲೋಚನೆಗಳನ್ನು 'ವಿಸ್ತರಿಸಿ'ದ್ದರೆ ಕನ್ನಡ ಕಾವ್ಯದ ರೀತಿಯೇ ಬದಲಾಗುತ್ತಿತ್ತು. ನನ್ನ ಅಭಿಪ್ರಾಯ ; ಅಡಿಗರು ನವ್ಯ ಕಾವ್ಯದ ಆಲೋಚನೆಗಳನ್ನು 'ಸಂಕುಚಿತ'ಗೊಳಿಸಿದರು. ತುಂಬ ಭರವಸೆಯಿಂದ ಹಾಗು ಅರ್ಥಪೂರ್ಣ ಘೋಷಣೆಗಳಿಂದ (ಮಣ್ಣಿನ ವಾಸನೆ, ಸಮಕಾಲೀನ ಪ್ರಜ್ಞೆ, ಆಡುಮಾತಿನ ಬಳಕೆ ಮುಂ....) ಸುರುವಾದ ನವ್ಯಕಾವ್ಯ 15-20 ವರ್ಷಗಳ ಅವಧಿಯಲ್ಲಿ ಒಂದು ತಿರುಗಣೆ ಮಡುವಾಗಿ, ಸಮಷ್ಟಿ ಬದುಕಿನಿಂದ ದೂರವಾಗಿ ಹೋದ ದುರಂತದಲ್ಲಿ ಅಡಿಗರ ಪಾಲೂ ಸಾಕಷ್ಟಿದೆ. ತಮ್ಮ ವೈಯುಕ್ತಿಕ ಮಿತಿ ಹಾಗು ಸಾವಿರಾರು ವರ್ಷಗಳ ವೈಧಿಕ ಸಂಸ್ಕಾರದಮಿತಿ–ಇವುಗಳನ್ನು ಮೀರಿ ಅವರು ತಮ್ಮ ಸ್ವಂತದ ಆಲೋಚನೆಗಳನ್ನು ಕೂಡ ವಿಸ್ತರಿಸಿಕೊಳ್ಳಲಾಗಲಿಲ್ಲ. ಅದು ಅವರ ವೈಯುಕ್ತಿಕ ದುರಂತವೂ ಹೌದು.

ಇನ್ನು ಎರಡನೆಯ ವಿಷಯ 'ಬಂಡಾಯ' ಎಂಬುದು ಬರಿ ಘೋಷಣೆಗೆ ಮತ್ತು ಪ್ರಾಮಾಣಿಕ ಆಶಯಗಳ ಪಾತಳಿಯಿಂದ ಬದುಕಿನ ಇನ್ನೂ ಆಳಕ್ಕಿಳಿದು, ಇಡೀ ದಮನಕಾರೀ ವ್ಯವಸ್ಥೆಯನ್ನು ಎದುರಿಸಬಲ್ಲ ಮನಸ್ಸುಗಳನ್ನು ತಯಾರು ಮಾಡಬೇಕಾಗಿದೆ. (ಸಿದ್ಧಲಿಂಗಯ್ಯನವರ ಇತ್ತೀಚಿನ ಕವನ ಸಂಕಲನ ನಾನು ನೋಡಿಲ್ಲ. ಅವರ ಮೊದಲ ಎರಡು ಸಂಕಲನಗಳು ಅವರ ಬೆಳವಣಿಗೆಯ ಮೊದಲ ಘಟ್ಟದ ಸಾಧ್ಯತೆಗಳು ಮುಗಿದುಹೋಗಿರುವುದನ್ನು ಸೂಚಿಸುತ್ತವೆ.) ನನ್ನ ಇತ್ತೀಚಿನ ಕವನ ಸಂಕಲನ-'ಹೂವು ಹೆಣ್ಣು, ತಾರೆ'ಯಲ್ಲಿ ನೀವು ಸೂಚಿಸಿದ ದಿಸೆಯಲ್ಲಿ ಕೆಲ ಗಂಭೀರ ಪ್ರಯತ್ನಗಳನ್ನು ನಾನು ಮಾಡಿದ್ದೇನೆ ಅನ್ನಿಸುತ್ತದೆ. ಬಂಡಾಯ ಚಳುವಳಿಯ ಸಂದರ್ಭದಲ್ಲಿಯೇ ಬರವಣಿಗೆ ಪ್ರಾರಂಭಿಸಿದ ಅನೇಕ ಎಳೆಯ ಗೆಳೆಯರು

ಭಾಷೆ ಹಾಗು ಲಯದ ಬಳಕೆ, ಕಾವ್ಯದ ಶಿಲ್ಪ, ಅಭಿವ್ಯಕ್ತಿಯ ವ್ಯಂಜಕತೆಯತ್ತ ಲಕ್ಷ್ಯ ಹಾಕಲೇಬೇಕಾಗಿದೆ. ಯಾವ 'ಸ್ವಚ್ಛಂದ–ಛಂದ'ವು ನವ್ಯ ಕಾವ್ಯಕ್ಕೆ ಮುಳು ವಾಯಿತೋ, ಅದೇ ಈಗಲೂ ಕೂಡ ನಮ್ಮ ಬಂಡಾಯ ಕವಿಗಳನ್ನು ಹಾದಿಗೆಡಿಸು ತ್ತಿದೆಯೇನೂ ಎಂಬ ಆತಂಕ ನನ್ನದು.

ಇತ್ತೀಚಿನ ಕಾವ್ಯ, ವಿಮರ್ಶಕರ ಅನಾದರಕ್ಕೆ ಗುರಿಯಾಗಿದೆ ಎಂಬ ಮಾತು ಕೇಳಿ ಬರುತ್ತಿದೆಯಲ್ಲಾ—ಇದಕ್ಕೆ ನೀವೇನು ಹೇಳುತ್ತೀರಿ ?

ಕನ್ನಡ ಕಾವ್ಯದ ಮೂಲ ಆಶಯುಗಳು ಬದಲಾಗುವ ಪ್ರತಿಯೊಂದು ಸಂದರ್ಭ ದಲ್ಲೂ ಇಂಥ ಮಾತು ಕೇಳಿಬರುತ್ತವೆ. ನವ್ಯಕಾವ್ಯದ ಪ್ರಾರಂಭದಲ್ಲೂ, ವಿಮರ್ಶಾ ವಲಯದಲ್ಲಿ ಸಾಕಷ್ಟು ಧೂಳಿ ಎದ್ದಿತು. ಹೊಸ ಹಂತದ ಕಾವ್ಯ ತನ್ನ ಸತ್ವವನ್ನು ಹೆಚ್ಚಿಸಿಕೊಳ್ಳುವುದರ ಮೂಲಕ ಮಾತ್ರ ವಿಮರ್ಶಕರ–ಅಥವಾ ರಿವ್ಯೂಕಾರರ– 'ಅನಾದರ'ವನ್ನು ದೂರ ಮಾಡಬಹುದು. ಅಲ್ಲದೆ, ಸಮಕಾಲೀನ ವಿಮರ್ಶಕರ ಆದರ–ಅನಾದರಗಳನ್ನೇ ನೆಚ್ಚಿಕೊಂಡು ಕಾವ್ಯ ಬೆಳೆಯಬೇಕಾಗಿಲ್ಲ. ಹಾಗೆ ನೋಡಿ ದರೆ, ಸಿಟ್ಟಿನಿಂದ ಒದರಾಡುವ ಒಬ್ಬಿಬ್ಬರು 'ವಿಮರ್ಶಕ'ರನ್ನು ಬಿಟ್ಟರೆ, ಉಳಿದವ ರೆಲ್ಲ ಕನ್ನಡ ಕಾವ್ಯದ ಬೆಳವಣಿಗೆಯ ಬಗ್ಗೆ ಸಾಕಷ್ಟು ತೆರೆದ ಮನಸ್ಸಿನವರೇ ಇದ್ದಾರೆ ; ನವ್ಯೋತ್ತರ ಕಾವ್ಯವನ್ನು ತುಂಬ ಸೀರಿಯಸ್ಸಾಗಿಯೇ ಪರಿಗಣಿಸಿದ್ದಾರೆ.

ಒಬ್ಬ ಲೇಖಕನಿಗಿರಬೇಕಾದ ನೀವು ಬಯಸುವಂಥ ರಾಜಕೀಯ ಪ್ರಜ್ಞೆ ಎಂತಹುದು ?

ಯಾವುದೇ ಲೇಖಕನಿಗೂ–ಅಂದರೆ 'ಭಾಷೆ' ಎಂಬ 'ಸಮಷ್ಟಿ' ಮಾಧ್ಯಮದ ಮೂಲಕ ಅನುಭವಗಳಿಗೆ ಕಲೆಯ ರೂಪ ಕೊಡಲು ಪ್ರಯತ್ನಿಸುವವ-ತನ್ನನ್ನು ಮೀರಿದ ಹಾಗು ತನ್ನನ್ನು ಒಳಗೊಂಡ 'ಸಮಷ್ಟಿ' ಪ್ರಜ್ಞೆ ಇರಲೇ ಬೇಕಾಗು ತ್ತದೆ ; ಇದ್ದೇ ಇರುತ್ತದೆ, (ಕೆಲವು ಹುಂಬರು ಇದನ್ನು ನಿರಾಕಕರಿಸಲೂಬಹುದು !) ಭವಿಷ್ಯದ ಬದುಕು 'ಹೇಗೆ' ಇರಬೇಕು ಎಂಬುದರ ಬಗ್ಗೆ ಒಬ್ಬ ಲೇಖಕ ಹೊಂದಿ ರುವ ಪರಿಕಲ್ಪನೆಯ ಮೇಲೆ ಅವನ 'ಪ್ರಜ್ಞೆ'ಯ ಸ್ವರೂಪ ನಿರ್ಧರಿತವಾಗುತ್ತದೆ. ನಾನೊಬ್ಬ ನಾಸ್ತಿಕ, ಶೂದ್ರ, ಲೋಹಿಯಾವಾದಿ. ಆರ್ಥಿಕ, ರಾಜಕೀಯ ಸಮಾ ನತೆ ಮಾತ್ರ ನಿಜವಾದ ಸ್ವಾತಂತ್ರ್ಯ ತರುತ್ತದೆ ಎಂಬ ದೃಢವಾದ ನಂಬಿಗೆ. ಈ ನಂಬಿಗೆಯ ಹಿನ್ನೆಲೆಯಲ್ಲಿ ಕೆಲಸ ಮಾಡುವಂಥ ರಾಜಕೀಯ ಪ್ರಜ್ಞೆ ನಮಗೆ ಇರ ಬೇಕಾಗುತ್ತದೆ.

ಹಾಸ್ಯ, ಹರಿತ ವ್ಯಂಗ್ಯ ಮತ್ತು ಕಾವ್ಯದ ಲಯಗಾರಿಕೆ ಪ್ರಧಾನವಾಗಿದ್ದು, ವಸ್ತು ಸ್ಥಿತಿಯನ್ನು ತಿಳಿಸುವ ನಿಮ್ಮ ನಾಟಕಗಳು, ಇವನ್ನೆಲ್ಲಾ ಉಳಿಸಿಕೊಂಡು ಇನ್ನಷ್ಟು

'Wide Canvas' ನಲ್ಲಿ ಸಮಕಾಲೀನ ವಾಸ್ತವದ ಎಲ್ಲ ಮುಖಗಳನ್ನು ತೆರೆಯುವ ನಾಟಕಗಳನ್ನು ರಚಿಸಲು ನೀವೇಕೆ ಪ್ರಯತ್ನಿಸಿಲ್ಲ ? ಆ ಥರದ ಆಲೋಚನೆ ಇದೆಯೆ ?

ನಾಟಕ ತುಂಬ ಸಂಕೀರ್ಣವಾದ, ಅಷ್ಟೇ ಪರಿಣಾಮಕಾರಿಯಾದ, ಆದರೆ ಕಷ್ಟಕರವಾದ ಮಾಧ್ಯಮ. ನೀವು ಸೂಚಿಸಿದ ರೀತಿಯಲ್ಲಿ ನಾನೂ ಎಲ್ಲಾ 'ತಯಾರಿ' ಮಾಡಿಕೊಳ್ಳುತ್ತಿರುವೆ. 'ಕಾಮಿಡಿ' ಅಂದರೆ ಜೋಕುಗಳ ಸರಮಾಲೆಯಾಗಿ 'ಟ್ರಾಜಿಡಿ' ಅಂದರೆ ಕಣ್ಣೀರಿನ ಹೊಳೆಯಾಗಿ-ಇರುವ ಸಧ್ಯದ ಸಂದರ್ಭದಲ್ಲಿ ವಾಸ್ತವಕ್ಕೆ ಹತ್ತಿರವಾಗಿದ್ದುಕೊಂಡು-ಆದರೆ allegoryಯೋ Farce ಫಾರ್ಸೋ ಆಗದಂಥ-ಬದುಕನ್ನು ಬಿಚ್ಚಿ ತೋರಿಸುವ ನಾಟಕಗಳು ನಮಗಿಂದು ಬೇಕು. ಆ ಥರದಲ್ಲಿ, ಅದೇ ಹೇಳಿದೆನಲ್ಲಾ, ತಾಲೀಮು ಮಾಡುತ್ತಿರುವೆ.

ನಮ್ಮ ಲೇಖಕರಲ್ಲಿ ಸ್ವವಿಮರ್ಶೆ ಸಾಕಷ್ಟು ಪ್ರಮಾಣದಲ್ಲಿ ಇದೆಯೆ ?

ಇದು ಉತ್ತರಿಸಲಾಗದ ಪ್ರಶ್ನೆ ನನ್ನ ಮಟ್ಟಿಗೆ ನಾನು ಹೇಳಬಹುದು : ಸ್ವವಿಮರ್ಶೆ ನನ್ನಲ್ಲಿ ಸಾಕಷ್ಟಿದೆ, ಅಂತ ಈ ಮಾತಿನ ಅರ್ಥವೇನು ಅಂತ ನನಗೂ ಗೊತ್ತಿಲ್ಲ. ಒಂದು ಮಾತು ಮಾತ್ರ ಖರೆ ; ಸ್ವವಿಮರ್ಶೆ ಎಂಬುದು ಜೀವಂತವಾಗಿ ಉಳಿಯಬೇಕೆಂಬ ಯಾವುದೇ ವ್ಯಕ್ತಿಗೂ ಬೇಕು. ಅದು ನಿಂತು ಹೋದಾಗ ಅಹಂಕಾರದ ಸುಂದರವಾದ ಸಮಾಧಿಯಲ್ಲಿ ಅವನು ಲೀನನಾಗಿ ಹೋಗುತ್ತಾನೆ.

ಇತ್ತೀಚಿನ ಕನ್ನಡ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ನೀವು ಅದರ ಗುಣಾವಗುಣಗಳ ಬಗ್ಗೆ ಏನಾದರೂ ಹೇಳುತ್ತೀರಾ ?

ಗೋಕಾಕ್ ಚಳುವಳಿಯ ಗುಣಾವಗುಣಗಳ ಬಗ್ಗೆ ಮಾತಾಡಲು ಈಗ ತಕ್ಕ ವಾತಾವರಣವಿದೆ. ಮನುಷ್ಯನನ್ನು ಮನುಷ್ಯನನ್ನಾಗಿ ಮಾಡಿದ 'ಭಾಷೆ' ಕುರಿತು ಮಾಡಿದ ಚಳುವಳಿ ಬದುಕಿಗಾಗಿ ಮಾಡಿದ ಚಳುವಳಿಯೇ ಆಗಿರುತ್ತದೆ. ಗೋಕಾಕ್ ಚಳುವಳಿ ಕನ್ನಡಿಗರಲ್ಲಿ ಕನ್ನಡ ಪ್ರಜ್ಞೆಯನ್ನು, ವ್ಯಕ್ತಿಯನ್ನು ಮೀರಿದ ಸಮಾಜ ಪ್ರಜ್ಞೆಯನ್ನು ಅರಳಿಸಿತು. ಅಲ್ಲದೆ, ಸಂಘಟನೆ–ಹೋರಾಟಗಳಲ್ಲಿ ಹೊಸ ವಿಶ್ವಾಸ ಮೂಡಿಸಿ, ಹತಾಶೆ–ಸಿನಿಕತೆಗಳ ಚೌಕಟ್ಟಿನಲ್ಲಿ ಭದ್ರವಾಗುತ್ತಲೇ ಇದ್ದ ಜಡವ್ಯವಸ್ಥೆಯನ್ನು ಬದಲಾಯಿಸಬಲ್ಲೆವು ಎಂಬ ಹೊಸ ಭರವಸೆ ಮೂಡಿಸಿತು. ನಾನು ಬಯಸಿರುವ ರಾಜಕೀಯ 'ಪ್ರಜ್ಞೆಯ' ಹಿನ್ನೆಲೆಯಲ್ಲಿ ಇದೊಂದು ಅರ್ಥಪೂರ್ಣವಾದ, ಪ್ರಗತಿಪರ ಚಳುವಳಿ ಎಂದೇ ನನ್ನ ಅಭಿಪ್ರಾಯ. ಕೆಲವರ ದೃಷ್ಟಿಯಲ್ಲಿ, ಈ ಚಳುವಳಿಯ 'ಅವಗುಣ' ಎಂದರೆ, ಮುಖವಾಡಗಳ ಹಿಂದೆ ಹಾಯಾಗಿ ಉಸಿರಾಡುತ್ತಿದ್ದ ಹಲವರ ಸ್ವಸ್ವರೂಪ ದರ್ಶನ ಮಾಡಿಸುವಂತೆ ಈ ಚಳುವಳಿ ಮಾಡಿತು-ಅಷ್ಟೆ.

# ಹುಲಿಯ ನೆರಳು—ಒಂದು ಟಿಪ್ಪಣಿ

ಕೆ. ಮರುಳಸಿದ್ದಪ್ಪ

ವಿದ್ಯಾವಂತ ಮಧ್ಯಮ ವರ್ಗದ ನಗರ ಜೀವನ ವರ್ತುಲದಲ್ಲೇ ಗಾಣದೆತ್ತಿನಂತೆ ತಿರುಗುತ್ತಿದ್ದ ನಮ್ಮ ರಂಗಭೂಮಿ ಇತ್ತೀಚಿನ ವರ್ಷಗಳಲ್ಲಿ ಗ್ರಾಮೀಣ ಬದುಕಿನತ್ತ ಕಣ್ಣು ಹಾಯಿಸುತ್ತಿದೆ. ಪ್ರೇಕ್ಷಕರ ವಿಚಾರ ಪ್ರಚೋದನೆಗೆ ಕಾರಣವಾಗಬಹುದಾದ ಗಮನಾರ್ಹ ಪ್ರಯೋಗಗಳು ನಡೆಯುತ್ತಿದೆ. ಹಿಂದಿನ ವರ್ಷದ ಮುಕ್ತಾಯ ಘಟ್ಟದಲ್ಲಿ ಪ್ರದರ್ಶನಗೊಂಡ 'ಒಡಲಾಳ' ಮತ್ತು ಈ ವರ್ಷದ ಆರಂಭದಲ್ಲಿ ಪ್ರಯೋಗಿಸಲಾದ 'ಹುಲಿಯ ನೆರಳು' ಈ ಎರಡೂ ನಾಟಕಗಳ ಮೂಲ ದ್ರವ್ಯ ಗ್ರಾಮೀಣ ಸಂಸ್ಕೃತಿ. 'ಒಡಲಾಳ'-ವಾಸ್ತವವಾದಿ ಮಾರ್ಗದಲ್ಲಿ ಸಮಕಾಲೀನ ಗ್ರಾಮೀಣ ಸಮಾಜದ ವರ್ಗ ಸಂಘರ್ಷವನ್ನು ಶೋಷಣೆಯ ಮಾದರಿಗಳನ್ನು ನಮ್ಮ ಮುಂದಿಟ್ಟರೆ 'ಹುಲಿಯ ನೆರಳು' ಸಂಕೇತಗಳ ಮೂಲಕ ಜಾನಪದ ಶೈಲಿಯಲ್ಲಿ ಈ ಶೋಷಣೆಯ ಮೂಲವನ್ನೇ ತಡಕುತ್ತಿದೆ.

ನೂರಾರು ವರ್ಷಗಳ ಹಿಂದಿನ ಗ್ರಾಮೀಣ ಸಮಾಜ ಅವಿಭಕ್ತ ಕುಟುಂಬದಂತೆ ಇಡಿಯಾಗಿ ಬಾಳುತ್ತಿತ್ತು. ಬಣ ಪ್ರಧಾನವಾದ ಈ ಸಮಾಜದ ಮುಖ್ಯಸ್ಥನಾದ ಗೌಡ ಹಳ್ಳಿಯ ಜನರನ್ನು ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ. ಕುಲ ದೇವತೆಯ ವಿಶಾಲವಾದ ಆಲದ ಮರದ ನೆರಳಿನಲ್ಲಿ

ರೂಢಿಬದ್ಧರಾಗಿ ನಿರ್ದಿಷ್ಟ ನಂಬಿಕೆಗಳಿಗೆ ನಿಷ್ಠರಾಗಿ ಮುಗ್ಧವಾಗಿ ಬದುಕುತ್ತಿದ್ದ ಈ ಜನತೆಯನ್ನು ನಾಗರಿಕತೆಯ ಸುಂಟರಗಾಳಿ ರಾಕ್ಷಸ ಸಾದೃಶವಾಗಿ ಆವರಿಸಿತು ; ಅವರ ಸಮಾಜದ ಮೂಲಭೂತ ಸ್ವರೂಪವನ್ನೇ ನಂಬಿಕೆಗಳನ್ನು ಬುಡಮೇಲುಗೊಳಿಸಿತು. ಈ ಆಘಾತದಿಂದ ತತ್ತರಿಸಿದ ಜನ ಕಂಗಾಲಾಗಿ ರಕ್ಷಕನೊಬ್ಬನಿದ್ದಾಗ ಮೊರೆಯಿಟ್ಟರು. ಅವರನ್ನು ಕಾಪಾಡಲು ಹೊರಟ ನಾಯಕನೂ ರಾಕ್ಷಸ ಕುಯುಕ್ತಿಗೆ ಬಲಿಯಾಗಿ ದುರಂತವನ್ನಪ್ಪುವುದು ಅನಿವಾರ್ಯವಾಯಿತು.

ಇದು ಸ್ಥೂಲವಾಗಿ 'ಹುಲಿಯ ನೆರಳು' ರಂಗಕೃತಿಯ ಕಥಾಸರಣಿಯೆನ್ನಬಹುದು. ಕಣ್ಮರೆಯಾಗಿರುವ ಈ ಪ್ರಾಚೀನ ಸಂಸ್ಕೃತಿಯನ್ನು ಕುರಿತ 'ಹಳಹಳಿಕೆ' ನಾಟಕದುದ್ದಕ್ಕೂ ಅನುರಣಿಸುತ್ತಿದೆ. ನಮ್ಮ ಪ್ರತಿಭಾವಂತ ಲೇಖಕ ಕಂಬಾರರ ವೈಶಿಷ್ಟ್ಯವಿರುವುದೂ ಇಲ್ಲಿಯೇ ! ಆಳವಾಗಿ ಹೊಕ್ಕು ಒಂದು ಸಂಸ್ಕೃತಿಯ ಮೂಲ ಬೇರುಗಳನ್ನು ಶೋಧಿಸತೊಡಗುವ ಅವರು ಸಹಜವಾಗಿಯೇ ಜನಪದ ಪುರಾಣಗಳನ್ನು ಆಶ್ರಯಿಸಬೇಕಾಗುತ್ತದೆ. ಸ್ಪಷ್ಟ ಮತ್ತು ನೇರವಾದ ವಾಸ್ತವ ಮಾರ್ಗವನ್ನು ಬಿಟ್ಟು ಸಂಕೇತಗಳತ್ತ ಕೈಚಾಚಬೇಕಾಗುತ್ತದೆ. ಆದರೆ ಈ ಸಂಕೇತಗಳೆಲ್ಲ ಕೃತಿಯ ಒಡಲಿನಲ್ಲಿ ಅರ್ಥಪೂರ್ಣವಾಗಿ ಸಂಯೋಜನೆಗೊಂಡಿದ್ದು ಒಟ್ಟಾರೆಯಾಗಿ ನಾಟಕದ ಕ್ರಿಯೆಗೆ ಸಹಕಾರಿಯಾಗಿವೆಯೆಂಬುದೇ ಇಲ್ಲಿ ಮುಖ್ಯವಾಗುತ್ತದೆ.

ಬೇಟೆಗೆ ಹೋದ ಗೌಡನ ವ್ಯಕ್ತಿತ್ವದಲ್ಲಿ ಸಂಪೂರ್ಣ ಬದಲಾವಣೆ ಕಂಡುಬರುವುದು, ಕಾಡಿನಲ್ಲಿ ಗೌಡನನ್ನು ಕೊಂದ ಹುಲಿರೂಪದ ರಾಕ್ಷಸ–ಗೌಡನ ವೇಷ ತೊಟ್ಟು ಊರು ಪ್ರವೇಶಿಸುವುದು, ಅನಾದಿ ಕಾಲದಿಂದ ಊರ ಜನಕ್ಕೆ ನೆರಳು, ಹಕ್ಕಿಗಳಿಗೆ ಆಶ್ರಯ ಕೊಡುತ್ತಿದ್ದ ಮರಕ್ಕೆ ಕೊಡಲಿ ಹಾಕುವುದು, ಊರ ಅಂತಃ ಸಾಕ್ಷಿಯಂತಿದ್ದ ಕರಿಯಜ್ಜನ ಅಕಾಲ ಮರಣ, ಗೌಡಿತಿಗೆ ಸನ್ನಿ ಬಡಿಯುವುದು, ಆಕೆಯ ಬಸಿರಿನಲ್ಲಿ ರಾಕ್ಷಸ ಪಿಂಡ ದಿನೇ ದಿನೇ ಬಲಿತು ಗೌಡನ ನಿಜವಾದ ವಾರಸುದಾರ ರಾಮುಗೊಂಡನೇ ತಾಯಿಯ ಮಾಯೆಗೆ ಬಲಿಯಾಗಿ ಅದನ್ನು ಬೆಳೆಸುವುದು, ಅಂತ್ಯದಲ್ಲಿ ರಾಮುಗೊಂಡನ ಸಾಹಸಗಳೆಲ್ಲ ಮಣ್ಣುಗೂಡಿ ಆತ ನಿರ್ಬಲನಂತೆ ಕೈಚೆಲ್ಲಿ ಕುಳಿತುಬಿಡುವುದು–ಮುಂತಾದ ಬಿಡಿ ಬಿಡಿ ಸಂಕೇತಗಳೆಲ್ಲ ನಾಟಕದ ಪ್ರಕ್ರಿಯೆಯಲ್ಲಿ ಒಂದಾಗಿ ಬೆರೆತಿವೆ. ಅಸ್ಪಷ್ಟವೆಂಬಂತಿದ್ದರೂ ಆಲೋಚಿಸಿದರೆ ಇವೆಲ್ಲಕ್ಕೂ ಅರ್ಥವತ್ತಾದ ಸಂಬಂಧವಿರುವುದು ಗೋಚರಿಸುತ್ತದೆ. ಈ ಎಲ್ಲ ಘಟನೆಗಳ ಮೂಲ ಹುಲಿಬೇಟೆಯಿಂದ ಹಿಂದಿರುಗಿದ ಗೌಡನಲ್ಲಾದ ಪರಿವರ್ತನೆಯೆಂಬುದೂ ಹೊಳೆಯುತ್ತದೆ. ಊರಿಗೆ ತಂದೆಯಂತಿದ್ದ ಗೌಡನೇ ರಾಕ್ಷಸನಾಗಿ ಊರ ಮೌಲ್ಯಗಳನ್ನು ನಾಶಮಾಡಲು ಹೊರಟ ನಾಟಕದ ದುರಂತವನ್ನು ಆಧುನಿಕ ನಗರ ನಾಗರಿಕತೆಯ ರಾಕ್ಷಸ ಪ್ರಭಾವದಿಂದ ಮುಗ್ಧವಾಗಿದ್ದ ನಮ್ಮ ಗ್ರಾಮೀಣ ಸಮಾಜವು ವಿಘಟನೆ

ಹೊಂದಿದ ಐತಿಹಾಸಿಕ ವಸ್ತು ಸ್ಥಿತಿಗೆ ಹೊಂದಿಸುವ ನಾಟಕದ ಆಶಯಕ್ಕೂ ಸಂಬಂಧ ವಿರುವುದೂ ಸ್ಪಷ್ಟವಾಗುತ್ತದೆ.

ಆದರೆ ಸಾಮಾಜಿಕ ಇತಿಹಾಸವನ್ನು ಹೀಗೆ ಸರಳಗೊಳಿಸಲು ಸಾಧ್ಯವೇ ? ಐತಿಹಾಸಿಕ ವಸ್ತುಸ್ಥಿತಿಗೆ ಈ ಸಂಗತಿ ಸತ್ವ ಹೊಂದಿಕೊಳ್ಳುತ್ತದೆಯೇ ? ಎಂಬ ವಿಚಾರ ಚರ್ಚಾರ್ಹವಾಗಿರಬಹುದು. ಬೆಡಗಿನ ವಚನಗಳ ನುಡಿಗಟ್ಟನ್ನು ರಚನಾ ವಿನ್ಯಾಸದಲ್ಲಿಯೇ ಹುದುಗಿಸಿಕೊಂಡಿರುವ ಈ ನಾಟಕದ ಅರ್ಥದ ಪದರುಗಳನ್ನೆಲ್ಲಾ ಬಿಡಿಸಲು ಸಾಧ್ಯವಾದರೆ ಇದಕ್ಕೆಲ್ಲಾ ಸಮಾಧಾನಕರ ಉತ್ತರವೂ ದೊರೆಯಬಹುದು. ಸಂಕೀರ್ಣವಾಗಿರುವ ಈ ನಾಟಕದ ವಾಚ್ಯಾರ್ಥವನ್ನು ಮಾತ್ರ ಲೆಕ್ಕಿಸಿದರೆ ಮೇಲುನೋಟಕ್ಕೆ ಕಾಣಸಿಗುವ ಚಿತ್ರವನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ. ಗ್ರೀಕ್ ರುದ್ರ ನಾಟಕ ಪರಂಪರೆಯ 'ಮುಕ್ಕೂಟ ನಾಟಕ'ಗಳನ್ನು ನೆನಪು ತರುವ ಬೀಸನ್ನೂ ಭವ್ಯತೆಯನ್ನೂ ಪುರಾಣ ಪ್ರಪಂಚದ ಸರ್ವಸ್ವವನ್ನೂ ಒಳಗೊಂಡಿರುವ ಕಂಬಾರರ 'ಹುಲಿಯ ನೆರಳು' ಮತ್ತು 'ಋಷ್ಯಶೃಂಗ' ಕೃತಿಗಳ ಸಮರ್ಥ ಅಧ್ಯಯನವಿನ್ನೂ ಈ ದಿಕ್ಕಿನಲ್ಲಿ ಸಾಗಬೇಕಾಗಿದೆ ಇಂತಹ ಗಂಭೀರ ಚರ್ಚೆಗೆ ಅವಕಾಶ ಮಾಡಿಕೊಡುವಂತಹ ಅರ್ಥಪೂರ್ಣ ರಂಗ ಪ್ರಯೋಗಗಳು ಮೂಡಿ ಬರಬೇಕು. ಈ ದಿಕ್ಕಿನಲ್ಲಿ ಪ್ರಸನ್ನ ನಿರ್ದೇಶಿಸಿದ 'ಹುಲಿಯ ನೆರಳು' ಮೊತ್ತಮೊದಲ ಅತ್ಯಂತ ಗಮನಾರ್ಹವಾದ ಸೃಜನಶೀಲ ರಂಗ ಪ್ರದರ್ಶನ ವೆಂಬುದು ನಿರ್ವಿವಾದ ಸಂಗತಿಯಾಗಿದೆ.

ಪ್ರಸನ್ನ ಈಗಾಗಲೇ ನಿರ್ದೇಶಿಸಿದ್ದ 'ಒಂದು ಲೋಕ ಕಥೆ' ಮತ್ತು 'ಮ್ಯಾಕ್ ಬೆತ್' ನಾಟಕಗಳ ವಿನ್ಯಾಸವನ್ನು ಇಲ್ಲಿಯೂ ಧಾರಾಳವಾಗಿ ಮತ್ತೆ ಬಳಸಿಕೊಂಡಿರುವುದು ತೀರಾ ಸಹಜ. 'ಹೇಳ್ತೇನೆ ಕೇಳ' ಲಾವಣಿಯ ಕಥಾಹಂದರದಲ್ಲಿಯೇ ಸ್ಥೂಲವಾಗಿ ಈ ಸಾಮ್ಯವಿರುವುದೂ ತೀರಾ ಸ್ಪಷ್ಟವಾಗಿರುವ ವಿಚಾರ. ಆದರೆ ವಿವರಗಳಲ್ಲಿ ಮತ್ತು ಆಶಯದಲ್ಲಿ ಇವೆರಡಕ್ಕೂ ಯಾವ ಸಂಬಂಧವೂ ಇಲ್ಲ. ದೃಶ್ಯ ಮತ್ತು ಶ್ರವ್ಯವೆರಡೂ ನೆಲೆಯಲ್ಲಿ ವಿವರಗಳನ್ನು ಕರಾರುವಕ್ಕಾಗಿ ಸೃಷ್ಟ್ಯಾತ್ಮಕವಾಗಿ ಯೋಜಿಸಿಕೊಂಡಿರುವ ಪ್ರಸನ್ನ ಇದಕ್ಕಾಗಿ ಹಲವು ಮೂಲಗಳಿಂದ ನೆರವು ಪಡೆದಿದ್ದಾರೆ ; ಜಾನಪದ ರಂಗ ಭೂಮಿಯಿಂದ ಚಲನಚಿತ್ರದವರೆಗೆ ಇದರ ವ್ಯಾಪ್ತಿಯಿದೆ.

ಪ್ರದರ್ಶನದ ಆರಂಭದಲ್ಲಿಯೇ ಗೌಡನ ಭವ್ಯ ಆಕಾರವನ್ನು ಅಚ್ಚೊತ್ತಿದಂತೆ ಪ್ರೇಕ್ಷಕರ ಮನಸ್ಸಿನಲ್ಲಿ ಮೂಡಿಸುವ ಮೂಲಕ ಹಳ್ಳಿಯ ಮೇಲೆ ಆತನ ಪ್ರಭಾವವನ್ನು ಅರ್ಥೈಸುವುದು, ಮಾಟಗಾತಿಯರು ಪ್ರವೇಶಿಸುವ ದೃಶ್ಯಗಳಲ್ಲಿ ಅರೆಗತ್ತಲೆಯ ಮಾಯಾಲೋಕದ ಫ್ಯಾಂಟಸಿಯ ವಾತಾವರಣ ನಿರ್ಮಿಸುವುದು, ಬಾವಿಯಿಂದ ಗೌಡನ ಭೂತ ಹೊರಬಂದು ರಾಮಗೊಂಡನೊಡನೆ ಮೊದಲ ಬಾರಿ ಮಾತಾಡುವ ದೃಶ್ಯ

ಕಲ್ಪನೆಯಲ್ಲಿ ಚಮತ್ಕಾರಿಯಾದ ಸಿನೆಮಾ ತಂತ್ರದ ನೆರವು ಪಡೆದಿರುವುದು, ಎರಡನೆ ಬಾರಿ ಬಿಳಿ ಬಟ್ಟೆಯಲ್ಲಿ ಸುತ್ತಿದ ಗೌಡನ ಭೂತ ಮಾತಾಡಿ ಹಿಂದೆ ಸರಿಯುವಾಗ ರಾಮ ಗೊಂಡನ ನೆರಳಿಗೆ ಸರಿಯಾಗಿ ಹೊಂದಿಕೊಳ್ಳುವುದು, ದೇವಿಯ ಮರವನ್ನು ಕಡಿಯು ವಾಗ ಕರಿಯಜ್ಜನ ಕರೆಗೆ ಓಗೊಟ್ಟು ಬಾಲಕಿ ರೂಪದ ಕರಿಮಾಯಿ ಪ್ರವೇಶಿಸುವುದು, ಸನ್ನಿ ಹಿಡಿದ ಗರ್ಭಿಣಿ ಗೌಡಿತಿಯನ್ನು ತೋರಿಸುವಾಗ ಮುಖ ಮತ್ತು ಮೈಗಳ ಮೇಲೆ ಪ್ರಖರವಾದ ಬೆಳಕು ಹಾಯಿಸಿ ಉಳಿದಂತೆ ಮಂಚದ ತುಂಬಾ ಕತ್ತಲು ಕವಿಸುವುದು, ಅಲ್ಲಿಗೆ ಬಂದ ಗೌಡ ಅವಳನ್ನು ಕನಸಿನಲ್ಲಿ ಎಂಬಂತೆ ಪುಸಲಾಯಿಸಿ ವಶಪಡಿಸಿಕೊಳ್ಳು ವುದು, ಕೊಟ್ಟ ಕೊನೆಗೆ ಒಂಟಿಯಾದ ರಾಮಗೊಂಡ ದುಃಖದ ಭಾರದಲ್ಲಿ ಕುಸಿದು ಮುಖ ಮುಚ್ಚಿ ಮೌನವಾಗಿ ತಲೆ ಬಾಗುವುದು—ಈ ದೃಶ್ಯ ವಿವರಗಳೆಲ್ಲ ಜೀವಂತ ವಾಗಿ ಮೂಡಿ ಬಂದವು. ಇಲ್ಲೆಲ್ಲಾ ನಿರ್ದೇಶಕರ ಕಲ್ಪನೆಗೆ ಸರಿಜೋಡಿಯಾಗಿ ನೆಳಲು ಬೆಳಕಿನ ಸಂಯೋಜನೆಯಿತ್ತು.

ಭಾಷೆಯ ನೆಲೆಯಲ್ಲಿ ಹಿಮ್ಮೇಳದ ಹಾಡುಗಾರಿಕೆಯಿಂದ ಸಂಭಾಷಣೆಯವರೆಗೆ ನಾಟಕದ ಭಾವಗೀತಾತ್ಮಕ ಗುಣವನ್ನು ಉಜ್ವಲಗೊಳಿಸುವ ನಿಟ್ಟಿನಲ್ಲಿಯೇ ನಿರ್ದೇಶಕರು ಎಚ್ಚರ ವಹಿಸಿದ್ದರು. ಜನಾರ್ಧನ ತಂಡದ ಸುಮಧುರ ಗಾಯನದೊಂದಿಗೆ ಸಂದರ್ಭಕ್ಕೆ ಪೋಷಕವಾಗುವಂತೆ ಪದ್ಯಗಳ ಸಾಲುಗಳನ್ನು ನಟರು ವಾಚನ ಮಾಡುವ ಕ್ರಮ ಪರಿ ಣಾಮಕಾರಿಯಾಗಿತ್ತು. ಆದರೆ ಕಥಕರಂತೆ ಹಲವು ಬಾರಿ ಬಂದು ಹೋಗುತ್ತಿದ್ದ ಇಬ್ಬರು ನಟರು ಕಥಾ ವಿವರಗಳನ್ನು ಗದ್ಯದಲ್ಲಿ ಒಪ್ಪಿಸುತ್ತಿದ್ದ ರೀತಿ ಮಾತ್ರ ಗ್ರಾಂಥಿಕ ವಾಗಿ ನೀರಸವಾಗಿ ಕಂಡುಬರುತ್ತಿತ್ತು. ನಾಟಕದ ಚೌಕಟ್ಟಿನ ಅಂಚಿನಲ್ಲಿಯೇ ಇವರ ಅಸ್ತಿತ್ವವಿರುವಂತಿತ್ತು.

ಅಭಿನಯ ದೃಷ್ಟಿಯಿಂದ ಎಲ್ಲ ನಟರೂ ನಾಟಕದಲ್ಲಿರುವ ತಮ್ಮ ವ್ಯಾಪ್ತಿಗೆ ಅನುಗುಣವಾಗಿ ಹವಣರಿತು ನಟಿಸಿದರು. ಮೂರು ಮುಖ್ಯ ಪಾತ್ರಗಳಾದ ಗೌಡ, ಗೌಡಿತಿ, ರಾಮಗೊಂಡರಲ್ಲಿ ಒಟ್ಟಾರೆಯಾಗಿ ಪ್ರೌಢ ಅಭಿನಯವಿತ್ತಾದರೂ ಪ್ರದರ್ಶನ ದಿಂದ ಪ್ರದರ್ಶನಕ್ಕೆ ಅಲ್ಪ ಸ್ವಲ್ಪ ವ್ಯತ್ಯಾಸವಿತ್ತು. ನಾನು ನೋಡಿದ ಮೊದಲ ಪ್ರದ ರ್ಶನದಲ್ಲಿ ಲೋಹಿತಾಶ್ವ ಪ್ರಖರವಾಗಿದ್ದು, ರವೀಂದ್ರ ಸಪ್ಪೆಯೆನಿಸಿದ್ದರು ; ಎರಡನೆಯ ಪ್ರದರ್ಶನದಲ್ಲಿ ರವೀಂದ್ರ ಕಳೆಗೂಡಿಕೊಂಡಿದ್ದು, ಲೋಹಿತಾಶ್ವ ನಿರುತ್ಸಾಹದಿಂದಿದ್ದರು. ಗೌಡಿತಿಯಾಗಿದ್ದ ಮಾಲತಿ ಎರಡೂ ಪ್ರದರ್ಶನಗಳಲ್ಲಿ ಸಂವೇದನಾತ್ಮಕ ಉತ್ತಮ ಅಭಿನಯದಿಂದ ಎಲ್ಲರ ಮೆಚ್ಚುಗೆಗೆ ಪಾತ್ರವಾದರು. ಸಂಭಾಷಣೆಯ ಏರಿಳಿತಗಳನ್ನು ಅಭಿನಯದೊಂದಿಗೆ ಅರ್ಥಪೂರ್ಣವಾಗಿ ಹೊಂದಿಸಿಕೊಳ್ಳುವ ಪ್ರಯತ್ನದಲ್ಲಿ ಮಾಲತಿ ಯವರು ಪಡೆದಿರುವ ಯಶಸ್ಸು ಅಸಾಧಾರಣವಾದುದು.

ರಂಗಸಜ್ಜಿಕೆ, ಉಡುಗೆ ತೊಡುಗೆ-ಇಲ್ಲೆಲ್ಲಾ ನಾಟಕಕ್ಕೆ ಪೋಷಕವಾಗುವಂತಹ ಅಚ್ಚುಕಟ್ಟು, ಒಪ್ಪ, ಓರಣಗಳಿದ್ದವು. ಈ ಬಗೆಯ ತಾಂತ್ರಿಕ ಪರಿಣತಿಗಿಂತ ಒಟ್ಟಾರೆಯಾಗಿ ನಾಟಕವನ್ನು ಪ್ರಸನ್ನ ವ್ಯಾಖ್ಯಾನಿಸಿದ ಬಗೆ ಮತ್ತು ಪ್ರದರ್ಶನ ವಿನ್ಯಾಸವನ್ನು ಯೋಜಿಸಿದ ರೀತಿಗಳು ಅವರೊಬ್ಬ ಶ್ರೇಷ್ಠ ನಿರ್ದೇಶಕರೆಂಬುದನ್ನು ಸಿದ್ಧ ಮಾಡಿ ತೋರಿಸುವಂತಿದ್ದವು. ಜಾನಪದ ಶೈಲಿಯ ನಾಟಕವೊಂದನ್ನು ಅವರು ಮೊತ್ತಮೊದಲು ಪ್ರಯೋಗಿಸಿದರೆಂಬ ದೃಷ್ಟಿಯಿಂದಲೂ ನಿರ್ದೇಶಕರಾಗಿ ಅವರಿಗೆ ಇದೊಂದು ಅಪೂರ್ವ ಅನುಭವವಾಗಿರಲು ಸಾಕು ; ಪ್ರೇಕ್ಷಕರಿಗಂತೂ ಅದ್ಭುತವಾಗಿತ್ತು.

ಕಂಬಾರರ ಎಲ್ಲ ನಾಟಕಗಳಿಗೂ ಸಮಾನವಾದ ವ್ಯಂಗ್ಯ, ಕಟಕಿ ಮತ್ತು ಹಾಸ್ಯಪರವಾದ ಮಾತುಗಾರಿಕೆ ಈ ನಾಟಕದಲ್ಲಿ ಅಷ್ಟಾಗಿ ಗೋಚರಿಸಲಿಲ್ಲ. ಆರಂಭದಿಂದ ಮುಕ್ತಾಯದವರೆಗೆ ಗಂಭೀರವಾಗಿ ಸಾಗುವ ನಾಟಕದಲ್ಲಿ ಹಿಮ್ಮೇಳದ ಹಾಡುಗಾರಿಕೆಯೊಂದೇ ಮನಸ್ಸನ್ನು ಉಲ್ಲಾಸಗೊಳಿಸುವ ಸಾಧನವಾಗಿದೆ. ಆದರೆ ಇನ್ನೂ ರಚನೆಯ ಹಂತದಲ್ಲಿಯೇ ಇರುವ ಈ ನಾಟಕ ಪ್ರದರ್ಶನದಿಂದ ಪ್ರದರ್ಶನಕ್ಕೆ ನಿರ್ದಿಷ್ಟಗೊಳ್ಳುತ್ತ ಹೋಗಿ ಅಂತಿಮ ರೂಪವನ್ನಿನ್ನೂ ಪಡೆಯಲು ಸಾಧ್ಯವಿದೆ. ●

---

"...ಸಾಹಿತ್ಯಾನುಭೂತಿಯ ಸೂತ್ರದಲ್ಲಿ ಹೊಸ ಹೊಸದಾದ ವಿಚಾರಗಳ ಗುಂಗನ್ನು ಕುಚ್ಚು ಕುಚ್ಚಾಗಿ ಕಿಚ್ಚಿ ಕಟ್ಟಿ, ಉಡುಪು ತೊಡಪು ಮಾಡುವುದು ಇಂದಿನ ಕಸಬುದಾರರಿಗೆ ಎಡಚು ಎಡಚಾಗುತ್ತಿದೆ ; ನಮ್ಮ ಭಾಷೆಯ ನೂಲು, ಉಣ್ಣೆ, ಪಟ್ಟೆ, ನಾರು, ಸೆಣಬು ಸಮುದ್ರದಾಚೆಯಿಂದ ಈಚೀಚೆಗೆ ಬಂದ ವೈಚಾರಿಕ ಹರಕ ಟೆರಲಿನ್, ನಾಯಲಾನ್ ಸರಕುಗಳಿಗೆ ಸರಿಹೋಗುತ್ತಿಲ್ಲ...ಆದರೂ ಕನ್ನಡ ಹಿಂಜರಿಯಬೇಕಾಗಿಲ್ಲ. ಪಾಶ್ಚಿಮಾತ್ಯರ ಅವಾಸ್ತವ ವಿಚಾರ ತಾಂಡವವು ನಮ್ಮನ್ನು ದಿಗ್ಭ್ರಾಂತಗೊಳಿಸಬಾರದು. ಇಂಗ್ಲಿಷ್ ಸಂಸ್ಕೃತಿಯ ಭಾಷೆಯ ಅಚ್ಚಿಗೂ ನಮ್ಮ ಭಾರತೀಯ ಜನಾಂಗಗಳ ನೆಚ್ಚಿಗೂ ಮೆಚ್ಚಿಗೂ ತುಂಬಾ ವೈಷಮ್ಯವಿದೆ. ಅವು ಭಾರತೀಯವಾಗಿ ಸಮಂಜಸತೆಯನ್ನು ಕಂಡರೆ ಅದೇ ತಂತ್ರ ಮುಂದುವರೆಸಿ ಸಾರ್ವಭೌಮಿಕ ಸಾಮರಸ್ಯವನ್ನು ಪಡೆದೀತು."

—ದಾ. ರಾ. ಬೇಂದ್ರೆ
(ಮನ್ವಂತರ–2)

---

# ಒಳನೋಟ

ಅನಂತಮೂರ್ತಿ-ರಾಜಶೇಖರ ಸಂದರ್ಶನದಲ್ಲಿ ನನ್ನ 'ಅತಿ', 'ಅತ್ತೆ-ಸೊಸೆ ಕಾದಾಟ'ದ ಬಗ್ಗೆ ಕೆಲವು ಲಘು ಮಾತುಗಳು ಬಂದಿವೆ. ಬರಲಿ. ಅದು ಮುಖ್ಯವಲ್ಲ. ನನ್ನ ಪ್ರಶ್ನೆ ಇಷ್ಟು.

1. ಸಂಸ್ಕೃತ, ಪಾಲೀ ಹಳೆಗನ್ನಡದ ಕಾವ್ಯದಲ್ಲಿ 'ಅತ್ತೆ-ಸೊಸೆ ಕಾದಾಟ'ಸಂದರ್ಭ ಎಲ್ಲಿಯಾದರೂ ವರ್ಣಿಸಲ್ಪಟ್ಟಿದೆಯೆ ? ಇದ್ದರೆ, ನನಗೆ ತಿಳಿಸಬೇಕು. ಇಲ್ಲವಾದರೆ ಏಕೆ ಬರಲಿಲ್ಲ ಎಂಬ ವಿವರಣೆ ಬೇಕು. ಭ್ರಾತೃ ಕಲಹ, ಸವತಿ ಮತ್ಸರ ಬಂದಿವೆ. ಇದುಏಕಿಲ್ಲ ?–ವಿದ್ವಾಂಸರು ತಿಳಿಸಿದಲ್ಲಿ ನಾನು ಉಪಕೃತ. ನನ್ನ ಅಭ್ಯಾಸ ಸಾಲದು. ಮೊದಲ ಬಾರಿ ನಾನು ಓದಿದ ಅತ್ತೆ-ಸೊಸೆ ಕಲಹ ಆಪ್ಟೆಯವರ ಮರಾಠಿ ಕಾದಂಬರಿಯಲ್ಲಿ (ಸತ್ಯನಾರಾಯಣ ಕತೆಯಲ್ಲಿ ಬರುವ ಲೀಲಾವತಿ-ಕಲಾವತಿ ಪ್ರಸಂಗದಲ್ಲಿ ಆದದ್ದು ಕಲಹವೆಂದು ಹೇಳಲಾಗದು, ಅವರು ಅತ್ತೆ-ಸೊಸೆ ಅಥವಾ ತಾಯಿ-ಮಗಳು ಸ್ಪಷ್ಟವಿಲ್ಲ.)

2. ಜಾನಪದ ಕಾವ್ಯದಲ್ಲಿ ೧೩ ನೇ ಶತಮಾನದ ಒಂದು ತೆಲುಗು ಹಾಡು ಇಂಥ ಕಲಹ ವರ್ಣಿಸಿದೆಯಂತೆ. (ಆಕ್ವಿಯಸ್ ಹೇಳಿದ್ದು.) ಪ್ರೌಢ ಕಾವ್ಯದಲ್ಲಿ ಅತೆ-ಸೊಸೆ ಕಲಹ ನಿಷೇಧಿಸಲಾಗಿತ್ತೆ ?

ಶಂಕರಮೊಕಾಶಿ ಪುಣೇಕರ್

ಲಾಕ್ಷಣಿಕ ಗ್ರಂಥದಲ್ಲಿ ಇಂಥ ಸೂತ್ರವಿದೆಯೆ ? ತಿಳಿಸಿದರೆ ಕೃತಜ್ಞ. ಗ್ರಾಮೀಣ ಸ್ತ್ರೀ ಸ್ವತಃ ದುಡಿಯುವವಳಾದ್ದರಿಂದ ದೊರೆತ ಆರ್ಥಿಕ ಸ್ವಾತಂತ್ರ್ಯದ ಮೂಲಕ ಗ್ರಾಮಾಂತರ ಅತ್ತೆ-ಸೊಸೆ ಕಲಹ ಹುಟ್ಟಿ ಜಾನಪದ ಹಾಡು ಹುಟ್ಟಿಕೊಂಡಿರ ಬಹುದೆ ?

3. ತೀರ ಬಡವರ ಮನೆಗಳೂ ಹಿಂದಿನ ಕಾಲಕ್ಕೆ ಪ್ರಶಸ್ತವಿರುತ್ತಿದ್ದವು. ಪ್ರೌಢ ಕಾವ್ಯದಲ್ಲಿ ಅತ್ತೆ-ಸೊಸೆ ಕದನವಿಲ್ಲದ್ದನ್ನು ಈ ಕಾರಣದಿಂದ ವಿವರಿಸ ಬಹುದೆ ?

ಒಟ್ಟಿನ ಮೇಲೆ ಇಂಥದೊಂದು ಪ್ರಶ್ನೆ ಇದೆಯೆಂಬುದು ಸ್ಪಷ್ಟ. ಇದನ್ನು ಲಘುವಾಗಿ ಗ್ರಹಿಸಬಾರದು. ಬ್ರಿಟಿಷರು ಬಂದು ಅತ್ತೆ ಸೊಸೆಯರ ನಡುವೆ ಕಲಹ ಹುಟ್ಟಿಸಿದರೆಂದು ನಾನು ಹೇಳಿಲ್ಲ. ವಿವಾಹ ವಯಸ್ಸಿನ ಬಗ್ಗೆ ಹೇಳುವಾಗ ಹೇಳಿದೆ. ಆ ಸಂಪೂರ್ಣ ಸಂದರ್ಭದಲ್ಲಿ ನನ್ನ ಮಾತಿನ ಯಥಾರ್ಥತೆ ತಿಳಿಯಬೇಕು. ಇನ್ನೊಂದು ಮಾತು. ಹಳೆಯದೆಲ್ಲಾ ಪುನಃ ಸ್ಥಾಪಿಸುವ ಹೆಬ್ಬಯಕೆ ನನಗಿಲ್ಲ. ಪ್ರತಿಯೊಂದು ಕಾಲದಲ್ಲೂ ಅದರ ಪದ್ಧತಿಗಳಿಗನುಗುಣವಾಗಿ ಸಮತೋಲನವೂ ಹುಟ್ಟಿಕೊಳ್ಳುತ್ತದೆಯೆಂಬುದು ಚಿರಂತನ ಸತ್ಯ. "ಮಾನವ ಜನ್ಮ ದೊಡ್ಡದು" ಅದರ ಶಕ್ತಿ ಸಮತೋಲನ ಶಕ್ತಿಯೇ ನಮ್ಮನ್ನು ಹಳೆ-ಹೊಸ ಜೀವನ ಪದ್ಧತಿಗಳ ಬಗ್ಗೆ ಸಮಾನ ಆದರ ಹುಟ್ಟಿಸುತ್ತದೆ. ಯಾವುದರ ಬಗ್ಗೆಯೂ ಅನಾದರ ಸಲ್ಲ ಎಂದು ನಾನು ನಂಬುತ್ತೇನೆ. ವಾದವಿವಾದ ಗಾಂಧಿಗೆ ಗಾಂಧಿಯಾಗಲು ಅಡ್ಡ ಬರಲಿಲ್ಲ.

ನನ್ನ ಲಿಖಿತ ಅಥವಾ ಭಾಷಿತ ಅಭಿಪ್ರಾಯಗಳಿಂದ ನಾನು ಬ್ರಿಟಿಷ್ ವಿರೋಧಿಯೆಂದು ಭಾವನೆ ಉಂಟಾದೀತು. ಬ್ರಿಟಿಷ್ ಶಿಕ್ಷಣ ಪದ್ಧತಿಯ ಲೋಪ ಗಳನ್ನು ಕಣ್ಣಾರೆ ಕಂಡ ನಾನು ಅದನ್ನು ವಿರೋಧಿಸುವುದು ಸಹಜ. ಅದರಿಂದ ಬ್ರಿಟನ್ನಿಗೇ ಕಲ್ಯಾಣವಾಗಿಲ್ಲ. ನಾನು ಭಾಷಾಬೋಧನೆಯಲ್ಲಿ ಡೈರೆಕ್ಟ್ ಮೆಥೆಡ್ಡಿನ ತೀವ್ರ ವಿರೋಧಿ ಅಲ್ಲದೆ, ಭಾರತದಿಂದ ಬ್ರಿಟನ್ನು ಏನೂ ಕಲಿಯಲಿಲ್ಲ, ಬರಿ ಕಲಿಸಿತಪ್ಪೆ, ಎಂದು ನನಗೆ ಆತಂಕ. ತನ್ನ ಅನುಕೂಲತೆಗಾಗಿ ನಮಗೆ ಬೇಕಾದ ಕೆಲವು ವಿಷಯಗಳನ್ನು ತಂದಿತು. ನಮ್ಮನ್ನು ಸೀಳಲು ಬೇಕಾದಷ್ಟು ಪರಿಸರ ನಿರ್ಮಿಸಿತು. ಆದರೂ ನಾವು ಒಂದಾಗಿ ಉಳಿದದ್ದು ನಮ್ಮ ಸ್ವತ್ತೆಯ ಮೂಲಕ. ಲುಮುಂಬಾ ಕೊಲೆಯ ನಂತರ ಬ್ರಿಟಿಷ್ ಪತ್ರಿಕೆಗಳು ಅದರ ವರದಿ ಮಾಡುವಾಗ ತಳೆದ ದುಷ್ಟಧೋರಣೆಯನ್ನು ನೋಡಿ ಬ್ರಿಟಿಷ್ ಲಿಬರಲ್ ಮನಸ್ಸು ಬಳಲುವ ಲೋಪಗಳ ಅರಿವು ನನಗೆ ಆಯಿತು. ದಿ॥ ಸಿ. ಎಂ. ಕುಲಕರ್ಣಿಯವರು ನನ್ನ

ಕಣ್ಣು ತೆರೆಸಿದರು. ಯೇಟ್ಸ್‌ನ ಅಭ್ಯಾಸ, ಎಂ. ಎನ್. ರಾಯರ India in Transition ದ ಅನುವಾದ (ಪ್ರಕಟವಾಗಿಲ್ಲ). ಹರಪ್ಪಾದ ಸೀಲುಗಳ ಅಭ್ಯಾಸ, 'ಮಧ್ಯಯುಗೀನ ಸಂಸ್ಕೃತಿಗೆ ಹರಿಜನರ ಕೊಡುಗೆ' ಗ್ರಂಥಕ್ಕಾಗಿ ಮಾಡಿದ ಅಭ್ಯಾಸ, ಇವೆಲ್ಲ ನನ್ನ ವಿಚಾರಗಳನ್ನು ನಿರ್ದಿಷ್ಟ ರೂಪಗೊಳಿಸಿವೆ. ನಾನಿನ್ನೂ ವಿದ್ಯಾರ್ಥಿ. ವಿವಿಧ ಕ್ಷೇತ್ರಗಳಲ್ಲೂ ಕಣ್ಣಾಡಿಸುವ ಚಟವಿದೆ. ಕಣ್ಣಿಗೆ ತಾಕಿದ ಆಶ್ಚರ್ಯದ, ಸೋಜಿಗದ ಕಾರಣ ಪರಂಪರೆಯನ್ನು ಶೋಧಿಸುವ ಯತ್ನದಲ್ಲಿ ಆಗೊಮ್ಮೆ ಈಗೊಮ್ಮೆ ಇಂಥ "ಅತಿ"ಗಳು ಬೇಕಾಗುತ್ತವೆ. ನಾನಾಗಿಯೇ ಬರೆಯುವುದು ಕಡಿಮೆ. ಯಾರಾದರೂ ಕೇಳಿದರೆ ಬರೆಯುವುದಷ್ಟೆ. ಕನ್ನಡ ಓದುಗರು ನನ್ನ 'ಅತಿ'ಗಳನ್ನು ಸಹನೆಯಿಂದ ನೋಡುವ ಕಾರಣವೆಂದರೆ, ಸಾಂದರ್ಭಿಕ ಸತ್ಯವಿಲ್ಲದೆ ಅತಿಗಳೂ ನನ್ನಿಂದ ಮೂಡುವುದಿಲ್ಲ. ಸಂದರ್ಭವೇ ಅತಿಯಾದ ಮೂಲಕ ಬರಹವೂ ಅತಿಯಾಗಿದೆ. 'ಅತಿ' ಸತ್ಯವನ್ನು 'ಅತಿ'ಯಿಲ್ಲದೆ ಹೇಳುವುದು ನನ್ನಿಂದಾಗದು. ಒಂದು ಅಭಿಪ್ರಾಯವನ್ನು ಹೇಳಲಿಕ್ಕೆ ಹತ್ತಾರು ಸಂಭಾವ್ಯ ಶಂಕೆಗಳನ್ನು ಒಡ್ಡಿ ನಿರುತ್ತರತೆಯನ್ನು ಗಳಿಸುವ ರೀತಿ-ನನಗೆ ಅಸಾಧ್ಯ. ಅದರ ಬಗ್ಗೆ ಹೆಚ್ಚಿನ ಆದರವೂ ನನಗಿಲ್ಲ. ಹುಂಬ ಸತ್ಯಗಳನ್ನು ಹುಂಬಗೈಯ್ಯಿಂದಲೇ ಎರಚುತ್ತೇನೆ. ಕೆಲವಾದರೂ ಚಿಗುರಲಿ ಎಂದು ಆಸೆ. ಸಕಾರಣ ತಪ್ಪುಗಳೇ ಆದರೂ ಸರಿ, ವಿದ್ವಾಂಸರು ಸರಿ ಕಾರಣ ಹುಡುಕಲು ಪ್ರವೃತ್ತರಾಗುತ್ತಾರೆ. ಅಷ್ಟು ಸಾಕು. ಹರಪ್ಪ ಯುಗದಲ್ಲೇ ನಮ್ಮಲ್ಲಿ ಪರಸೆ (Guild) ಇದ್ದವೆಂದು ನಾನು ಅಳುಕುತ್ತ ೮ ವರ್ಷದ ಕೆಳಗೆ ಬರೆದದ್ದನ್ನು ಎಸ್. ಆರ್. ರಾವ್ ಈಗ ಸಮರ್ಥಿಸಿದ್ದಾರೆ. ಇನ್ನೇನು ಬೇಕು ?

ಇನ್ನು ಹರಿಜನರ ಹೆಸರುಗಳು. ಎಲ್ಲ ಪಾತ್ರಗಳಿಗೆ ಹೆಸರು ಇರಬೇಕೆಂದಲ್ಲ ಈ ಹೆಸರಿಲ್ಲದ ಪಾತ್ರಗಳೇ ಇರಕೂಡದೆಂಬ ನಿಯಮ ದೋಸ್ತೊವಸ್ಕಿ-ಟಾಲ್ಸ್‌ಟಾಯ್ ಪಾಲಿಸುತ್ತಾರೆ. ನಮ್ಮ ಹಳೆ ಜನಾಂಗದ ಕಾದಂಬರಿಕಾರರು ಪಾಲಿಸಿದ್ದಾರೆ. ಬಂಕಿಮ ಚಂದ್ರ, ಶರಚ್ಚಂದ್ರ, ಟಾಗೊರಾಗಲೀ. ನಮ್ಮ ಗಳಗನಾಥ, ಪುಟ್ಟಸ್ವಾಮಯ್ಯ, ಕುವೆಂಪು ಪಾಲಿಸಿದ್ದಾರೆ. ಆ ಮನುಷ್ಯಗೌರವ ಹೊಸ ಪೀಳಿಗೆಯಲ್ಲಿ ಮಾಯವಾಗಿದೆ. ಇದು ನನ್ನ ಸಾಮಾನ್ಯ ತಕರಾರು. ಬೈರಪ್ಪ, ಚಿತ್ತಾಲ, (ತುಸುಮಟ್ಟಿಗೆ ದೇಸಾಯಿ ಮತ್ತು ನಾನು) ಇಂಥ ಕಾಳಜಿ ವಹಿಸುತ್ತಾರೆ. ಎನ್ನಬಹುದು. ಅನಂತಮೂರ್ತಿಗೂ ಈ ಕಾಳಜಿ ಇದೆ. (ಅಭಿವ್ಯಕ್ತಿ ಪ್ರಧಾನ ಲೇಖಕರಾದ ಲಂಕೇಶ, ತೇಜಸ್ವಿ ಇವರಲ್ಲಿ ಕಡಿಮೆ, ಇವರನ್ನು ಓದುವ ರೀತಿಯೇ ಬೇರೆ.) ಆದರೆ, ಭಾರತಿಪುರದ ಹತ್ತು ಹರಿಜನರ ಮನೆ ಸುಟ್ಟು ಬೂದಿಯಾಗಿವೆ. ಒಂದು ಮಗು ಕೂಡ ಬೆಂದಿದೆ. ಇದು ಮನುಷ್ಯ ಸಹಜ ಅನುಕಂಪ ಹುಟ್ಟಿಸುತ್ತದೆ. ನಾಯಕ ದುರ್ಬಲನೆಂದು ಒಪ್ಪಿದ ಮೇಲೂ, ನಾವು ಜಗನ್ನಾಥನನ್ನು ಒಪ್ಪಬಹುದೇ

ಹೊರತು ಲೇಖಕರನ್ನಲ್ಲ. ಇದು ಕಲಾತ್ಮಕ ದೋಷ; ವ್ಯಕ್ತಿಗತ ದೋಷವಲ್ಲ. ಇಡೀ ಕಾದಂಬರಿಯನ್ನು "ಜಗನ್ನಾಥ ನೋಡಿದಂತೆ" ಎಂದರೂ ಇದು ಅಕ್ಷಮ್ಯ. ಕಲಾತ್ಮಕವಾಗಿ ಅಕ್ಷಮ್ಯ, ಎಂದು ನನ್ನ ಅಭಿಪ್ರಾಯ. ಜಗನ್ನಾಥನಲ್ಲಿದ್ದುದು ಸಾಮಾಜಿಕ ಆದರ್ಶವಾದ. ಅದರಲ್ಲಿ ಅವನು ಸೋಲುತ್ತಾನೆ ಎಂಬುದು ಮುಖ್ಯವಲ್ಲ. ತನ್ನ ಆದರ್ಶವಾದದಿಂದ ನಮ್ಮಲ್ಲಿ ಕೆಲವು ಸಾಮಾಜಿಕ ಅಪೇಕ್ಷೆಗಳನ್ನು ಹುಟ್ಟಿಸಿದ್ದಾನೆ. 'ಹರಿಜನರು ರೇಗಬೇಕು', ಎಂಬ ಮಾರ್ಕ್ಸಿಸ್ಟ್ ಸಿದ್ಧಾಂತವನ್ನು ಹೇಳುತ್ತಾನೆ. ಹರಿಜನ ತಹಸೀಲ್ದಾರರನ್ನು ಕಂಡಾನೆ. ಅವರು ಕೊಡಮಾಡಿದ ಚಹಾದ ಬಗ್ಗೆ ವಿವರಗಳಿವೆ. ಹತ್ತು ಗುಡಿಸಲು ಸುಟ್ಟಾಗ, ಒಂದು ಮಗು ಬೆಂದಾಗ, ಅವನ ಆದರ್ಶವಾದವು ಅವನ್ನು ಅಲ್ಲಿ ಏಕೆ ಒಯ್ಯಲಿಲ್ಲ, ಈ ಪ್ರಶ್ನೆಗೆ ಕೇವಲ ಅವನು ದುರ್ಬಲನೆನ್ನುವುದು ಸಮರ್ಪಕ ಉತ್ತರವಲ್ಲ. **ಅನಂತಮೂರ್ತಿಯ ದರ್ಶನದಲ್ಲಿ Mass ಕಲ್ಪನೆ ಇದ್ದುದೇ ಕಾದಂಬರಿಯ ಮುಖ್ಯ ದೋಷ.** ಜಗನ್ನಾಥನದಲ್ಲ. Mass ದೂರದಿಂದ ಆಕ್ರೋಶಿಸುತ್ತಿದ್ದುದನ್ನು ದೂರದಿಂದಲೇ ಕೇಳಿದಾಗ ಈ Mass ಕಲ್ಪನೆ ಪುಷ್ಟಿಗೊಂಡು ಜಗನ್ನಾಥ ಅಮಾನವೀಯನಾಗುತ್ತಾನೆ. ಇದಾದ ಮೇಲೂ ಅವನ ಯತ್ನಗಳು ಮುಂದುವರಿಯುವುದು ವಿಸಂಗತವಾಗುತ್ತದೆ.

ಈ ಸೂಕ್ಷ್ಮ ಮಾತನ್ನು ಸ್ಥೂಲವಾಗಿ 'ಹೆಸರೇ ಇಲ್ಲ' ಎಂದು ನಮೂದಿಸಿದ್ದೇನೆ. ಅಷ್ಟೇ. ಇದು ಕ್ರೈಸಿಸ್ ಆದ ಮೂಲಕ ಮಹತ್ತ್ವ ಪಡೆಯುತ್ತದೆ. ಇದು ಕ್ರೈಸಿಸ್ ಎಂದು ಗುರುತಿಸಲಿಕ್ಕೆ ಅನಂತಮೂರ್ತಿಯವರಿಗೆ ತಾಳ್ಮೆ ಸಾಲದು, ಕ್ರಿಯೆ ನಿಷ್ಕ್ರಿಯತೆಗಳ ನಡುವೆ ಈ ನವ ಪಾತ್ರ ತನ್ನ ನೈಜತೆಗೆ ಎರವಾಗುತ್ತದೆ.

ಇನ್ನೂ ತಡವಾಗಿಲ್ಲ, ಈಗ್ಯೂ ಅನಂತಮೂರ್ತಿ ಗುಡಿಸಲು ಸುಟ್ಟ ಘಟನೆಯ ನಂತರ ಇನ್ನೊಂದು ಅಧ್ಯಾಯ ಸೇರಿಸಿ, ಜಗನ್ನಾಥ ಆ ಹರಿಜನರನ್ನು ಸಂದರ್ಶಿಸಿ, ವೃತ್ತಪತ್ರಿಕೆಗೆ ವರದಿ ಕಳಿಸಿದನೆಂದು ಬರೆಯಬಹುದು. ಆದರೆ ಅದನ್ನು ಹೇಳುವ ಅಧಿಕಾರ ನನಗಿಲ್ಲ. ಜಗನ್ನಾಥನ 'doomed to failure' ಪರಿಕಲ್ಪನೆಯಲ್ಲಿ ಏನೂ ತಪ್ಪಿಲ್ಲ. ನಿರ್ವಹಣೆಯಲ್ಲಿ ತಪ್ಪಿದೆ. ಇಷ್ಟೇ ಹೇಳಬಹುದು.

ಇನ್ನೊಂದು ಆತಂಕವೆಂದರೆ, ಅನಂತಮೂರ್ತಿಯವರ ಕಾದಂಬರಿಯ ಕಲ್ಪನೆಯೇ ದೋಷಾರ್ಹವಾದದ್ದು. 'ಸಂಸ್ಕಾರ' ಬಗ್ಗೆ ಸಂದರ್ಶನದಲ್ಲಿ ಹೇಳಿದ್ದಾರೆ, ಇಡೀ ಕಾದಂಬರಿಯನ್ನು ಕಾವ್ಯದಂತೆ ಓದಬೇಕು, ಎಂದು. ಒಂದು ಅಧ್ಯಾಯ ಸೇರಿಸಿದರೆ, 'ಭಾರತೀಪುರ' ಒಳ್ಳೆ ಕಾದಂಬರಿಯಾದೀತು. ಆದರೆ ಕಾವ್ಯವಾಗಲಾರದು ಅದರ ಕಾವ್ಯವಿರುವುದು ಅದರ 'Masses' ಪರಿಕಲ್ಪನೆಯಲ್ಲಿ. ಜಗನ್ನಾಥ ಸುಟ್ಟ

ಗುಡಿಸಲುಗಳ ಸಮೀಪ ಹೋದಲ್ಲಿ, ದೂರದಿಂದ ಆಕ್ರೋಶ ಕೇಳುವವರ ಕಾವ್ಯ ಮಯತೆಗೆ ಭಾಷೆ ಬರುತ್ತದೆ.

ನನ್ನ ಪರಿಕಲ್ಪನೆ ಬೇರೆ. ಕಾದಂಬರಿಯನ್ನು ಕಾವ್ಯದ ಹಾಗೆ ಬರೆಯಬಾರದು ; ಓದಬಾರದು ; ಕಾದಂಬರಿ ಕಾದಂಬರಿಯಂತೆ ಇರಬೇಕು. ಕಾವ್ಯ ಕಾವ್ಯದಂತೆ ಇರಬೇಕು. ತಮ್ಮ ಕಾದಂಬರಿಯನ್ನು ಕಾವ್ಯದಂತೆ ಆಗಬೇಕೆಂಬ ಅವರ ಮನಸ್ಸು ನಾನು ಒಪ್ಪಲಾರೆ. ಇದು ಬೆಳೆಯುವ ಲೇಖಕರಿಗೆ ತಪ್ಪು ಆದರ್ಶ ಹಾಕಿಕೊಟ್ಟಂತೆ. ಹುಂಬ ಸತ್ಯಗಳನ್ನು ಹುಂಬ ಲೇಖನಿಯಿಂದ ಹುಂಬ ಶೈಲಿಯಲ್ಲಿ ಬರೆದರೂ ನಡೆದೀತು. ಹುಂಬತನದ ಮೂಲಕವೇ ನಮ್ಮ ಸಮಾಜದ ನೈಜ ಟಿಪ್ಪಣಿ ಬರುತ್ತದೆ, ಎಂದು ನನ್ನ ಭಾವನೆ-ಶೈಲಿ-ರೂಪಬಂಧಗಳಿದ್ದರೆ, 'ಒಡಲಾಳ' 'ಅಂತರಗಂಗೆ'ಯ ಮಟ್ಟಕ್ಕೆ ಏರಬಹುದು. ಬರಿ ಶೈಲಿಯಿದ್ದರೆ 'ರಂಗನಾಯಕಿ', 'ಕಲ್ಲು ಹೇಳಿತು', 'ವೃದ್ಧಾಶ್ರಮ'ವಾಗಬಹುದು. ರೂಪಬಂಧವಿದ್ದರೆ 'ಜೆ. ಕೆ. ಮಾಸ್ತರ' ಬರಬಹುದು. ಎರಡೂ ಇಲ್ಲದಿದ್ದರೂ ಕೂಡ ತನ್ನ ಜೀವಂತಿಕೆಯ ಮೂಲಕ 'ಕೃತಪುರದ ಯಲಗುರ್ದ'ನಾಗಬಹುದು. ಆದರೆ ಮೂಲದ್ರವ್ಯಕ್ಕೆ ಹುಂಬತನವೇ ಮುಖ್ಯ.

ಕಾವ್ಯದಂತೆ ಕಾದಂಬರಿ ರಚಿಸುವುದು–ಓದುವವರಲ್ಲಿ ಮೇಲಿನ ಆತಂಕಗಳು ಉದ್ಭವಿಸುತ್ತವೆ. ಹೊಸ ಕಾದಂಬರಿಕಾರರಲ್ಲಿ ಹುಂಬ ಸಾಚಾತನ ಬರಲಿ ಎಂದು ಹಾರೈಸುತ್ತೇನೆ. ಕಾದಂಬರಿಯನ್ನು ಕಾವ್ಯದಂತೆ ಬರೆಯುವ ಹವ್ಯಾಸ ಬರಬೇಕು. ಸಮರ್ಥರಿಗೂ ಇದು ಆತಂಕಕಾರಿ. ಅಸಮರ್ಥರಂತೂ 'ಗತಿ-ಸ್ಥಿತಿ' ಬರೆಯುತ್ತಾರೆ, 'ಗತಿ ಸ್ಥಿತಿ'ಯ ದುರ್ಗತಿಯೆಂದರೆ ಅದರ ಮೇಲೆ ಬಂದ ವಿಮರ್ಶೆ ಕಾದಂಬರಿಗಿಂತ ಒಳ್ಳೆಯದಾಗಿತ್ತು. ಇದರ ಶ್ರೇಯಸ್ಸು 'ಸಾಕ್ಷಿ'ಗೆ ಸಲ್ಲಬೇಕು !

"After all, religious experience is part of the heritage of mankind, whatever one may think about the theologies erected round it. The rejection of the theologies need not necessarily imply the rejection of the experiences"

—**Ninian Smart**

# ಭಾಷಾ ಚಳುವಳಿ :—ಒಂದು ಅನುಭವ

—ಡಿ. ಎಸ್. ಶ್ರೀಕಂಠಮೂರ್ತಿ

ಕನ್ನಡ ಭಾಷೆಯ ಬೆಳವಣಿಗೆಯ ಬಗ್ಗೆ, ಕರ್ನಾಟಕದಲ್ಲಿ ಅದರ ಪ್ರಾಶಸ್ತ್ಯದ ಬಗ್ಗೆ ಬಹುಶಃ ಎಲ್ಲ ಕನ್ನಡಿಗರಿಗೂ ಒಂದೇ ಅಭಿಪ್ರಾಯವಿದೆ ಎಂದು ಹೇಳಿದರೆ ತಪ್ಪಾಗಲಾರದು. ನಮ್ಮ ನಾಡಿನಲ್ಲಿ ನಮ್ಮ ಭಾಷೆಯ ಹಿರಿತನವನ್ನು ಯಾರೂ ಅಲ್ಲ ಗಳೆಯಲಾರರು. ಯಾರಾದರೂ ಹಾಗೆ ಮಾಡಿದ್ದೇ ಆದರೆ ಅವರಿಗೆ ಕನ್ನಡ ಸಂಸ್ಕೃತಿಯ ವಿವಿಧ ಮುಖಗಳ ಪರಿಚಯವಿಲ್ಲವೆಂದೇ ಹೇಳಬೇಕು. ಇತ್ತೀಚೆಗೆ ಕನ್ನಡ ಭಾಷೆಯ ಸ್ಥಾನಮಾನದ ಬಗ್ಗೆ ಬಹಳಷ್ಟು ನಿಲುವುಗಳು ನಮ್ಮ ನಾಡಿನಲ್ಲಿ ತಾಳಿವೆ. ಗೋಕಾಕ್ ಭಾಷಾ ಸೂತ್ರ ವರದಿಯ ತರುವಾಯ ಆರಂಭವಾದ ಚಳು ವಳಿ ಇತ್ತೀಚೆಗೆ ತಲೆಯನ್ನು ಬಿಟ್ಟು ಬಾಲದ ಕೂದಲನ್ನು ಹಿಡಿದು ಇದೇ ಸತ್ಯ ಎಂಬ ಭ್ರಮೆಯ ಮಾತುಗಳು ಕೇಳಿಬರುತ್ತಿವೆ. ಇದಕ್ಕೆ ಪೂರಕವಾಗಿ ಕನ್ನಡ ನಾಡಿನ ಭೌಗೋಳಿಕ, ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ವಸ್ತುಸ್ಥಿತಿಯ ಅರಿವಿಲ್ಲ ದವರು ಕನ್ನಡ ಭಾಷಾ ಚಳುವಳಿಯ ಮುಂಚೂಣಿಯಲ್ಲಿರುವುದು ಬಹಳ ಕುತೂಹಲ ಕಾರಿಯಾಗಿದೆ.

ಮೂರು ಮತ್ತು ನಾಲ್ಕನೇ ದರ್ಜೆಯ ನೌಕರರಾಗಿ ಆಯ್ಕೆಯಾಗಬೇಕಾದರೆ ಕನ್ನಡ ಕಡ್ಡಾಯವಾಗಿ ಕಲಿತಿರಬೇಕೆಂಬ ಕೋಪೋದ್ರೇಕಿತವಾದ ಚಳುವಳಿಯ ಬಹು ಮುಖ ಪರಿಚಯ ಬೆಂಗಳೂರಿನಲ್ಲಿ ವಾಸ ಮಾಡುತ್ತಿರುವವರಿಗೆ ಜನವರಿ ಹದಿನೆಂಟನೇ ತಾರೀಖು ಆಯಿತು.

ರಾಜಕುಮಾರ್ ಅಭಿಮಾನಿಗಳ ಸಂಘದವರು ಕರೆಯುತ್ತಿದ್ದ "ಬೆಂಗಳೂರು ಬಂದ್"ಗೆ ಓಗೊಟ್ಟು ಬಹುಪಾಲು ಅಂಗಡಿಗಳು, ಹೋಟೆಲ್‌ಗಳು, ಚಿತ್ರಮಂದಿರ ಗಳು ಮುಚ್ಚಿದ್ದಲ್ಲದೆ ಸಾರ್ವಜನಿಕ ಸಂಚಾರ ವ್ಯವಸ್ಥೆ ರದ್ದಾಗಿತ್ತು. ಹಸು ಮಕ್ಕಳೂ, ರೋಗಿಗಳೂ, ಹೆಂಗಸರೂ ಹಾಗೂ ದಿನಗೂಲಿಯನ್ನು ಆರಂಭಿಸಿ ಜೀವನ ಮಾಡು ತ್ತಿರುವ ಶ್ರಮಿಕ ವರ್ಗವೇ ಎಂದಿನಂತೆಯೇ ಅಂದೂ ಸಹ ತೊಂದರೆ ಪಡಬೇ ಕಾಯಿತು. ರಜತ ಪರದೆಯ ಮೇಲೆ ಯಾರಿಗಾಗಿ ತಾನು ತನ್ನೆಲ್ಲವನ್ನೂ ಮುಡಿ ಪಿಟ್ಟು ಹೋರಾಟ ಮಾಡುವ ರಾಜಕುಮಾರ್, ಅಂದು ತನ್ನ ಅಭಿಮಾನಿಗಳ ಮುಖೇನ ನಿಜ ಜೀವನದಲ್ಲಿ ಅದೇ ವರ್ಗದ ಮೇಲೆ ಮಾಡಿದ ಅತ್ಯಾಚಾರ ಒಂದು ವಿಧಿಯ ವ್ಯಂಗ್ಯ.

ನಾನು ಓದಿದ ನನ್ನ ಹಳ್ಳಿಯ ಪ್ರೌಢಶಾಲೆಯ ವಾರ್ಷಿಕೋತ್ಸವಕ್ಕೆ ನನ್ನನ್ನು ಹಾಗೂ ಸೆಂಟ್ರಲ್ ಕಾಲೇಜಿನ ಪ್ರೊಫೆಸರ್ ಒಬ್ಬರನ್ನು ಅತಿಥಿಗಳಾಗಿ ಅಂದು ಕರೆದಿದ್ದರು. ಸಮಾರಂಭ ಮುಗಿಸಿಕೊಂಡು ಬೆಂಗಳೂರಿಗೆ ವಾಪಸ್ಸಾಗುತ್ತಿರುವ ಹೊತ್ತಿಗೆ ಸುಮಾರು ಐದು ಘಂಟೆಯಾಗಿತ್ತು. ಕೆಂಗಲ್ ಹನುಮಂತಯ್ಯ ರಸ್ತೆಯಲ್ಲಿ ನಾವು ವಾಪಸ್ಸಾಗುತ್ತಿದ್ದಾಗ, ಸಿದ್ಧಯ್ಯ ರಸ್ತೆಯ ಕಡೆಯಿಂದ ಒಬ್ಬ ವಯಸ್ಸಾದ ಮುದುಕ ಹಣ್ಣು ಮಾರುವ ಗಾಡಿಯಲ್ಲಿ ಬೆಡ್‌ಶೀಟ್‌ನಲ್ಲಿ ಕಟ್ಟಿದ ಒಂದು ಭಾರವಾದ ಗಂಟು ಇಟ್ಟುಕೊಂಡು ಪ್ರಯಾಸದಿಂದ ತಳ್ಳಿಕೊಂಡು ಬರುತ್ತಿದ್ದ. ಅವನ ಕಷ್ಟವನ್ನು ನೋಡಿ ಸಹಾಯ ಮಾಡಲು ಕಾರಿನಿಂದ ಇಳಿದೆ. ಆ ಮುದುಕನ ವೇಷಭೂಷಣಗಳು ಆತನು ಮುಸಲ್ಮಾನ್ ಜಾತಿಗೆ ಸೇರಿದವನೆಂದು ಹೇಳುತ್ತಿತ್ತು. ಗಾಡಿಯ ಬಳಿ ಹೋದರೆ ನಾನು ನೋಡಿದ್ದು ಒಬ್ಬ ಹೆಣ್ಣುಮಗಳ ಶವ. ಸ್ವಲ್ಪ ವಿಚಲಿತನಾದೆ. ಆದರೂ ಮಾತನಾಡದೆ ಗಾಡಿಯನ್ನು ತಳ್ಳಿ ಸಮತಟ್ಟಾದ ರಸ್ತೆಯ ಭಾಗಕ್ಕೆ ಬಂದೆವು.

ಆ ಮುದಕನ ಕಣ್ಣಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು. ನಿಮ್ಮ ಮಗಳಾ ? ಕೇಳಿದೆ. ಅಲ್ಲವೆಂದ. ಮತ್ತಷ್ಟು ಜೋರಾಗಿ ಅಳಲು ಆರಂಭಿಸಿದ. ಸ್ವಲ್ಪ ಶಮನವಾದ ಮೇಲೆ ನನ್ನನ್ನು ಕೇಳಿದ–ನೀವು ಹಿಂದೂನ ? ಹೌದಂದೆ. ಹಾಗಾದರೆ ಈ ಹೆಣವನ್ನು ಸ್ಮಶಾನದೊಳಗೆ ಸಾಗಿಸಿ ದಫನ್ ಮಾಡಿಸಿ. ಎಲ್ಲಾ ಖರ್ಚನ್ನು ಕೊಡುತ್ತೇನೆ. ನಾನು ಮುಸಲ್ಮಾನ್. ನಿಮ್ಮ ಹಿಂದೂಗಳ ಸ್ಮಶಾನಕ್ಕೆ ಬಂದರೆ ರಂಪಾಟವಾಗಬಹುದೆಂದ. ಆ ಕ್ಷಣಕ್ಕೆ ನನ್ನ ಕಣ್ಣಲ್ಲಿ ನೀರು ಬಂದಿತ್ತು.

ರಹೀಮ್‌ಖಾನ್ ಸಿಟಿ ಮಾರ್ಕೆಟ್ ಬಳಿ ಹಣ್ಣು ಮಾರುವವ. ಆತನ ಮಕ್ಕಳು ಆತನ ಜತೆಯಲ್ಲಿಲ್ಲ. ಸತ್ತ ಹೆಣ್ಣು ಮಗಳು ಶಾಂತಮ್ಮ. ಕಡಲೇಕಾಯಿ, ಮಿಠಾಯಿ ಮಾರುತ್ತಿದ್ದ ಮತ್ತೊಬ್ಬ ಅನಾಥೆ. ಹತ್ತು ದಿನಗಳು ಆಸ್ಪತ್ರೆಯಲ್ಲಿದ್ದು ಅಂದು ಮುಂಜಾನೆ ತೀರಿಕೊಂಡಳು. ಹೇಗೋ ಕಷ್ಟಪಟ್ಟು ಹಣ ಕೂಡಿಸಿಕೊಂಡು ರಹೀಮ್‌ಖಾನ್ ಶವವನ್ನು ತನ್ನದೇ ಕೈಗಾಡಿಯಲ್ಲಿಟ್ಟುಕೊಂಡು ವಿಲ್ಸನ್‌ಗಾರ್ಡನ್ ಸ್ಮಶಾನಕ್ಕೆ ತಂದಿದ್ದ.

ಶಾಂತಮ್ಮ ಕನ್ನಡದ ಮಗಳು. ರಹೀಮ್‌ಖಾನ್ ಅನಕ್ಷರಸ್ಥ ಹೌದು. ಆದರೆ ಕನ್ನಡ, ಉರ್ದು, ತಮಿಳು ಮಾತನಾಡುತ್ತಾನೆ.

ಬಹುಶಃ ಅದೇ ಸಂಜೆ ಐದರ ವೇಳೆಗೆ ಬಿನ್ನಿಪೇಟೆ ಮತ್ತು ಸುತ್ತ ಮುತ್ತ ಪ್ರದೇಶದಲ್ಲಿ ನಮ್ಮ ಕನ್ನಡ ಭಾಷಾ ಪ್ರಿಯರು ಮುಸಾಲ್ಮಾನ್‌ರ ಗುಡಿಸಲುಗಳ ಮೇಲೆ, ತಮಿಳರ ಮೇಲೆ ಆಕ್ರಮಣ ಮಾಡುತ್ತಿದ್ದರು.

ಹೇಗೋ ನಾವು ಆ ಹೆಣ್ಣುಮಗಳನ್ನು ಭೂಮಿತಾಯಿಗೆ ಒಪ್ಪಿಸಿದೆವು. ದಾರಿಯಲ್ಲಿ ಬರುತ್ತ ನಮ್ಮ ಪ್ರೊಫೆಸರ್ ಹೇಳಿದರು–ಆ ಮುದುಕಪ್ಪ ಸುಮಾರು ಎರಡು

ಮೈಲಿ ಶವಾನ ತಳ್ಳಿಕೊಂಡು ಬಂದಿದ್ದಾನೆ. ಯಾರೂ ನೋಡೇ ಇಲ್ಲವಾ ? ಅದೇ ನಾವರೂ ಮುಸ್ಲಿಂ ಶವವಾಗಿದ್ದರೆ, ಮಸೀದಿಗೆ ವಿಚಾರ ತಿಳಿಸಿದ್ದರೆ ಸಾಕಾಗಿತ್ತು. ನಾಲ್ಕು ಜನ ಬಂದು ಸಹಾಯ ಮಾಡ್ತ ಇದ್ದರು. ಸತ್ತವಳೇನೊ ಹಿಂದೂನೆ. ಆದರೆ ಯಾವ ಜಾತಿ ? ನಮ್ಮ ಜನ ಸಹಾಯ ಮಾಡುವುದು ಅದರ ಆಧಾರದ ಮೇಲೆ ತಾನೇ ? ನಾನೇನೂ ಮಾತಾಡುವ ಸ್ಥಿತಿಯಲ್ಲಿರಲಿಲ್ಲ. ಮನಸ್ಸಿನ ತುಂಬಾ ರಹೀಮ್‌ಖಾನ್‌ನ ವ್ಯಕ್ತಿತ್ವ ತುಂಬಿತ್ತು. ಜತೆಗೇ ನಮ್ಮ ಚಳುವಳಿಗಾರರ ಭಯಂಕರ ಮುಖಗಳು ಕನ್ನಡ ಆಡು ಭಾಷೆಯ ಲಕ್ಷೋಪಲಕ್ಷ ಜನಕ್ಕೆ ಲಿಪಿಯು ಪರಿಚಯುವೇ ಇಲ್ಲದಿರುವಾಗ, ಭಾಷೆಗಿಂತ ಮಿಗಿಲಾಗಿರುವ ದೈತ್ಯಾಕಾರದ ಪ್ರಶ್ನೆಗಳು ನಮ್ಮ ಮುಂದಿರುವಾಗ, ಅಬ್ಬಬ್ಬಾ ಎಂದರೆ ಸುಮಾರು ಎರಡು ಅಥವಾ ಮೂರು ಸಾವಿರ ಜನರಿಗೆ ಸಿಗುವ ನೌಕರಿಗೆ ಬ್ರಹ್ಮಾಸ್ತ್ರ ಉಪಯೋಗಿಸುತ್ತಿರುವ ನಮ್ಮ ಭಾಷಾ ಅಭಿಮಾನಿಗಳ ನಿಜವಾದ ಉದ್ದೇಶವೇನು ಎಂದು ಅನುಮಾನ ಬರುತ್ತದೆ. ರಾಜ್‌ಕುಮಾರ್‌ರನ್ನು ಕಳೆದ ಚುನಾವಣೆಯಲ್ಲಿ ಐಕ್ಯವಿರೋಧಿ ರಂಗಕ್ಕೆ ನೇತಾರರಾಗ ಬೇಕೆಂಬ ಕೂಗು ಅವರ ಅವಿದ್ಯಾವಂತ ಅಭಿಮಾನಿಗಳೇ ಅಲ್ಲದೆ ಕೆಲವು ಲೋಹಿಯಾವಾದಿಗಳೂ ಸಹ ಸೇರಿದ್ದರು. ರಾಜ್ ಅವರಿಗೇನಾದರೂ ರಾಜಕೀಯದಲ್ಲಿ ಆಸಕ್ತಿಯಿದ್ದರೆ ಅವರು ಸೈದ್ಧಾಂತಿಕ ಚೌಕಟ್ಟಿನಲ್ಲಿ ಕೆಲಸ ಮಾಡಿ ಜನರ ಬೆಂಬಲ ಪಡೆಯಬೇಕೆಂದು ಒತ್ತಿ ಹೇಳುವ ಅವಶ್ಯಕತೆಯಿಲ್ಲ. ಭಾವನಾತ್ಮಕವಾಗಿ ನಮ್ಮ ಬುದ್ಧಿಜೀವಿಗಳು ಮಾಡುವ ವಿಪರೀತದ ಫಲಗಳೇ ಈ ಅಭಿಮಾನಿ ಸಂಘಗಳ ಆಶ್ರಯದ ಚಳುವಳಿಯ ಬಳುವಳಿಗಳು ಎಂಬುದನ್ನು ನಾವು ಮರೆಯಬಾರದೂ ಹಾಗು ಕ್ಷಮಿಸಬಾರದು. ರಾಜ್ ಅಭಿಮಾನಿಗಳು ಈ ಹಿಂದೆ ಕರ್ನಾಟಕಕ್ಕೆ ಸೇವೆ ಸಲ್ಲಿಸಿದ್ದವರಿಗೆ ಸನ್ಮಾನ ಮಾಡಿದರು. ಅದಕ್ಕೆ ವಿಧಾನಸೌಧದ ಮುಂಭಾಗವನ್ನು ಉಪಯೋಗಿಸಲಾಯಿತು. ಆ ಸಮಾರಂಭಕ್ಕೆ ಸುಮಾರು ಜನ ನಮ್ಮ ಮಂತ್ರಿಗಳೂ ಹೋಗಿದ್ದರು. ಆ ಸನ್ಮಾನಿತರಲ್ಲಿ ವ್ಯಂಗ್ಯವೇನೆಂದರೆ ಶ್ರಮಿಕ ವರ್ಗದ ಪ್ರತಿನಿಧಿಯಾಗಿ ಒಬ್ಬೇ ಒಬ್ಬರೂ ಇಲ್ಲದಿದ್ದದ್ದು.

ನಮ್ಮ ಸಂಪುಟದ ಕೆಲವು ಸದಸ್ಯರ ನಡವಳಿಕೆ, ಅವರ ನಾಚಿಕೆಯಿಲ್ಲದ ವರ್ತನೆಗಳು, ರಾಜಕುಮಾರರಿಗೆ gun men ಆಗಿ ಕೆಲಸ ಮಾಡುವ ರೀತಿ ನಿಜಕ್ಕೂ ಹೇಸಿಗೆ ತರುವಂಥವು.

ಈ ಹಿನ್ನೆಲೆಯಲ್ಲಿ ನನಗೆ ಗೋಚರವಾಗುವ ಪ್ರತಿನಿಧಿಗಳು ಶಾಂತಮ್ಮ ಮತ್ತು ರಹೀಮ್‌ಖಾನ್ ಇವರ ಬಗ್ಗೆ ಚಿಂತಿಸುವುದರಿಂದ ನಮ್ಮ ಭಾಷಾ ಪ್ರಾಶಸ್ತ್ಯ ಒಂದೆ ಸರಿಯುವುದಿಲ್ಲ. ಮಾತ್ರವಲ್ಲ ಕನ್ನಡ ಒಡನಾಡಿಗಳ ಮೇಲೆ ನಮ್ಮ ಕಳಕಳಿ ಸ್ವಲ್ಪ ಮಾನವೀಯತೆಯಿಂದ ಕೂಡಿರುತ್ತದೆ.



# ಕನಸಿಗೊಂದು ಕಣ್ಣು

## ಒತ್ತಾಯದಿಂದ ಬರೆದ ಒಂದಷ್ಟು ಬಿಡಿ ಮಾತು

ಕೋಟ್ಯಾನುಕೋಟಿ ಮಕ್ಕಳಿಗೆ ತಮ್ಮ ಸ್ಕೂಲಿನ ದಿನಗಳು ಇತ್ತೀಚಿನ ದಿನಗಳಲ್ಲಿ ಹೇಗನಿಸುತ್ತಿವೆಯೆಂದು ನೂರಾರು ಮಕ್ಕಳನ್ನು ಕೇಳುವ ಆಸೆ. ಆದರೆ ಅವರೆಲ್ಲ ಆಗ ತಾನೆ ರೆಕ್ಕೆ ಪುಕ್ಕ ಕಳೆದುಕೊಂಡು ಜೈಲಿನಿಂದ ಬಂದವರಂತೆ ಕಾಣುತ್ತಾರೆ. ಒಂದು ರೀತಿಯ ಕೃತಕ ವಾತಾವರಣವನ್ನು ನಿರ್ಮಿಸುವುದರಲ್ಲಿ ಎಲ್ಲರೂ ನಾಗಾಲೋಟದಿಂದ ಸಾಗುತ್ತಿದ್ದಾರೆ. ಮತ್ತೊಂದು ಅರ್ಥದಲ್ಲಿ ಸ್ಕೂಲಿನ ದಿನಗಳು ಸತ್ತಿರುವುದರಿಂದ ಮನುಷ್ಯ ಸಂಬಂಧಗಳು ಭೀಕರ ರೂಪವನ್ನು ಅಪ್ಪಿಕೊಳ್ಳುತ್ತಿರುವುದು ಪೂರ್ಣ ಸಹಜ ಎನ್ನುವ ಮಟ್ಟಿಗೆ ಬಂದು ತಲುಪಿದ್ದೇವೆ. 'ಗುರು-ಶಿಷ್ಯ' ಆತ್ಮೀಯ ಚೌಕಟ್ಟು ದೂರ ಸರಿಯಲು ಯಾಗ್ಯಾರು ಕಾರಣ ಎಂದು ಬೆಟ್ಟು ಮಾಡಿ ತೋರಿಸಲು ಕಷ್ಟವೆನ್ನುವ ಮಟ್ಟಿಗೆ ಗೊಂದಲಕ್ಕೊಳಗಾಗಿದ್ದೇವೆ. ಅಥವಾ ನಾನು ಒಳಗಾಗಿದ್ದೇನೆಯೇ ಅನ್ನಿಸುತ್ತಿದೆ. ಇದರಲ್ಲಿ ಯಾವುದನ್ನು ಹೃದಯ ಬಿಚ್ಚಿ ಹೇಳಿಕೊಳ್ಳಬೇಕು ಮತ್ತು ಎಷ್ಟನ್ನು ಹೇಳಿಕೊಳ್ಳಬೇಕು ಎಂದುಕೊಳ್ಳುವಾಗಲೆಲ್ಲ ಸಾಯುವ ಶಬ್ದಗಳೇ ಜಾಸ್ತಿ.

ಕೆಲವು ದಿನಗಳ ಹಿಂದೆ ನನಗೆ ತುಂಬ ಪ್ರಿಯರಾದ ಹಿರಿಯ ಸಂಪಾದಕರೊಬ್ಬರ ಮುಂದೆ ಕೂತು ಆರಾಮವಾಗಿ ಮಾತಾಡುತ್ತಿದ್ದಾಗ ; ತಮ್ಮ ಎರಡೂವರೆ ವರ್ಷದ ಮೊಮ್ಮಗಳ ಬಾಲ-ಲೀಲೆಗಳನ್ನು ವರ್ಣಿಸುತ್ತಿರುವಾಗ ಪುಳಕಿತರಾಗುತ್ತಿದ್ದರು. ಯಾರು ತಾನೇ ಪುಳಕಿತರಾಗುವುದಿಲ್ಲ ? ಮನುಷ್ಯನಿಗೆ ಪ್ರಿಯವಾದ ವಸ್ತುಗಳಲ್ಲಿ ಮಕ್ಕಳೂ ಸದಾ ಸೇರಿರುತ್ತಾರೆ ಎಂಬುದನ್ನು ಮರೆಯುವಂತಿಲ್ಲ. ಆದರೆ ಈ ಮಕ್ಕಳೂ ಸಹಾಯಾರ ಪ್ರೀತಿಯೂ ದೊರಕದೆ ಬದುಕುತ್ತಿರುವುದನ್ನು ಕಾಣುತ್ತಿರುತ್ತೇವೆ. ಅದರಲ್ಲೂ ಬೆಂಗಳೂರಿನಂಥ ಕ್ರೂರ ನಗರದಲ್ಲಿ ಸಾವಿರಾರು ಹತ್ತು ವರ್ಷದೊಳಗಿನ ಮುಸ್ಲಿಂ ಮಕ್ಕಳು ದಿನಕ್ಕೆ ಹನ್ನೆರಡು ಘಂಟೆ ದುಡಿಯುವುದನ್ನು ಕಂಡಾಗ ನಮ್ಮ ಭಾವಾತ್ಮಕ ಸಂಬಂಧಗಳಿಗೆ ಯಾವ ರೀತಿಯ ಅರ್ಥ ಕೊಡಬೇಕೋ ಗೊತ್ತಿಲ್ಲ. ಇವರ ಪಾಲಿಗಂತೂ ಶಾಲಾ ದಿನಗಳು ಎಂದಿಗೂ ಬಾಗಿಲು ತೆರೆಯುವುದಿಲ್ಲ. ಇದಕ್ಕೆ ಯಾರೂ

ಕಾರಣರು, ಒಂದು ಕಡೆ ಸತ್ತ ಶಾಲೆಗಳಿಗೆ ಕೋಟ್ಯಾನುಕೋಟಿ ರೂಪಾಯಿ ವೆಚ್ಚ ಮಾಡುತ್ತೇವೆ. ಮನುಷ್ಯರನ್ನು ಪ್ರೀತಿಸಲಾರದ ವಿದ್ಯೆಯನ್ನು ಕೊಡುತ್ತೇವೆ. ಮುಂದೆ ಲಂಚ ಕೊಟ್ಟು, ಕೆಲಸ ಪಡೆದು ಮುಗ್ಧರನ್ನು ವಂಚಿಸುವ ಕೆಲಸ ಕೊಡುತ್ತೇವೆ. ಈ ದೃಷ್ಟಿಯಿಂದ ನನ್ನ ಹಿರಿಯ ಸಂಪಾದಕ ಮಿತ್ರರ ಒಂದು ಮಾತು ಎದೆಗೆ ವಿಚಿತ್ರ ರೀತಿಯಲ್ಲಿ ಬಡಿಯಿತು. ತಮ್ಮ ಎರಡೂವರೆ ವರ್ಷದ ಮೊಮ್ಮಗಳಿಗೆ ಬೇಬಿ ಸಿಟ್ಟಿಂಗ್ ಸೇರಿಸಿಕೊಳ್ಳಲು ಸಂದರ್ಶನ ನಡೆಸಿದರೆಂಬುದನ್ನು ಕೇಳಿ, ದುಡ್ಡಿನ ಮೊತ್ತವನ್ನು ಹೆಚ್ಚಿಸಿಕೊಳ್ಳಲು ನಡೆಸುವ ಈ ಸಂದರ್ಶನ, ಒಂದು ರೀತಿಯಲ್ಲಿ ಅನಾಗರಿಕರ ನಡವಳಿಕೆ. ಈ ಸಂದರ್ಶನ ಪ್ರತಿಭೆಯ ಚೌಕಟ್ಟಿನಲ್ಲಿ ಇಲ್ಲವೇ ಅದನ್ನು ಉದ್ದೀಪನಗೊಳಿಸಲು ನಡೆಸುವುದಲ್ಲ.

ದಿನನಿತ್ಯ ಬೆಳಗ್ಗೆಯಿಂದ ಸಂಜೆಯವರೆವಿಗೆ ತರಗತಿಯ ಕೊಠಡಿಯಲ್ಲಿ ಉಪಾಧ್ಯಾಯರಿಗೆ ಭಯಪಟ್ಟು ಕೂರುವ ಈ ಮಕ್ಕಳಿಗೆ ಉಪಾಧ್ಯಾಯರು ಎಂದೂ ಪ್ರೀತಿಯ ಸಂಕೇತಗಳಲ್ಲ. ಸದಾ ಕೈಯಲ್ಲಿ ಕೋಲನ್ನು ಹಿಡಿದೇ ಸುತ್ತಾಡುವ ಉಪಾಧ್ಯಾಯರು ಹೇಗೆ ಮಕ್ಕಳ ಮುಂದೆ ಅಭಿಮಾನದ ದ್ಯೋತಕವಾಗಿ ನಿಲ್ಲಲು ಸಾಧ್ಯ? ಒಮ್ಮೆ ರೂಸೋ ಹೇಳಿದ: ಮಗುವಿನ ಭಾವೋದ್ವೇಗಗಳ ಆಧಾರದ ಮೇಲೆ ಮೇಲೆಯೇ ಶಿಕ್ಷಣವು ಬೆಳೆಯಬೇಕು. ಮನಸ್ಸು ಎಂಬುದು ಪ್ರತ್ಯೇಕವಾದ ವಸ್ತುವಲ್ಲ. ಹಾಗೆಯೇ ಇಲ್ಲಿ ಫ್ರಾಯ್ಡ್‌ನ ಮಾತನ್ನು ನೆನಪಿಸಿಕೊಳ್ಳುವುದು ಮುಖ್ಯ. "ಯಾರು ಮಕ್ಕಳ ಮನಸ್ಸಿನೊಳಕ್ಕೆ ಹಾದಿಯನ್ನು ಕಂಡುಕೊಳ್ಳಬಲ್ಲರೋ ಅವರು ಮಾತ್ರವೇ ಮಕ್ಕಳಿಗೆ ಶಿಕ್ಷಣ ಕೊಡಬಲ್ಲರು. ಬೆಳೆದ ಮನುಷ್ಯರಾದ ನಾವು ಮಕ್ಕಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ನಮ್ಮ ಬಾಲ್ಯವನ್ನೇ ನಾವು ಅರಿತುಕೊಂಡಿರುವುದಿಲ್ಲ."

ಬಾಲ್ಯವನ್ನು ಕುರಿತು ಅಂತರ್ಮುಖಿಯಾಗದ ವ್ಯಕ್ತಿ ಮುಂದೆ ಹಿಂಸಾವಾದಿಯಾಗಿ ಕೊನೆಗೊಳ್ಳಬಹುದು. ಇದನ್ನು ಗಾಂಧಿ ರಸ್ಕಿನ್‌ನಲ್ಲಿ ಮತ್ತು ಟಾಲ್‌ಸ್ಟಾಯ್‌ನಲ್ಲಿ ಕಂಡುಕೊಂಡಾಗ ಗಾಂಧಿ ಉಬ್ಬಿ ಹೋದರು. ಆದ್ದರಿಂದಲೇ ಗಾಂಧಿಯವರ ಬರವಣಿಗೆ ಹಾಗೂ ನಡವಳಿಕೆ ಹೆಚ್ಚು ಸೂಕ್ಷ್ಮವಾಗಿ ಹಾಗೂ ಸರಳವಾಗಿ ಗೋಚರಿಸುವುದು. ಯಾಕೆಂದರೆ ಬಾಲ್ಯದಿಂದ ಪಡೆಯುವ ಅದರಿಂದ ರೂಪಿಸಿಕೊಳ್ಳುವ ಮನುಷ್ಯ ಸಂಬಂಧಗಳು ಹೆಚ್ಚು ಮಾರ್ಮಿಕವಾಗಿರಲು ಸಾಧ್ಯ. ಆದರೆ ಇದ್ಯಾವುದನ್ನು ಪಡೆಯದ ಮನುಷ್ಯರು ಎಂದಿಗೂ ಮನುಷ್ಯರಾಗುವುದಿಲ್ಲ. ಕೊನೆಗೆ ತಾವು ಈ ಬದುಕಿನಲ್ಲಿ ಏನನ್ನು ಪಡೆದಿವಿ ಏನನ್ನು ಕಳೆದುಕೊಂಡಿವಿ ಎಂಬುದನ್ನು ಯೋಚಿಸುವುದಕ್ಕೇ ಹೋಗುವುದಿಲ್ಲ.

ಕಳೆದ ಭಾನುವಾರ ನಾನು ಹುಟ್ಟಿ, ಬೆಳೆದ, ಮತ್ತು ನನ್ನ ಬಾಲ್ಯದ ಬಹಳಷ್ಟು ಕಾಲ ನಲಿದಾಡಿದ ಪ್ರದೇಶಕ್ಕೆ ಹೋಗುವ ಮನಸ್ಸಾಯಿತು. ಬೆಂಗಳೂರು ಜಿಲ್ಲೆಯ

ಅಂಚಿನಲ್ಲಿರುವ ಹೊಸೂರು ತಾಲ್ಲೂಖಿಗೆ, ಅದು ಇರುವುದು ತಮಿಳುನಾಡಿನಲ್ಲಿ. ನಿನಿ ಯಾನ್‌ಸ್ಮಾರ್ಟ್‌ನ ಭಾಷಣ ಕೇಳಿಕೊಂಡು ಶಿವಾಜಿ ನಗರಕ್ಕೆ ಬಂದಾಗ ಕಿ. ರಂ. ರವರು ಕೊಡಿಸಿದ ಬೆಚ್ಚನೆಯ ಕಾಫೀ ಕುಡಿದು ಲಕ್ಕಸಂದ್ರದ ಬಳಿಗೆ ಬಂದೆ. ಸ್ವಲ್ಪ ಸಮಯ ಅಲ್ಲಿಯ ಸ್ಟಾಪಿನಲ್ಲಿ ನಿಂತಿದ್ದವರನ್ನೆಲ್ಲಾ ಕಣ್ಣಿನಿಂದ ಸಂದರ್ಶಿಸಿದೆ. ಬಸ್ಸು ಬಂತು. ಬಿಳಿಯ ಮೈಬಣ್ಣವನ್ನು ಹೊತ್ತ ಲಕ್ಸುರಿ ಬಸ್. ಬಹುದೂರ ಹೋಗುವ ಬಸ್ಸಿರ ಬಹುದೆಂದು ತಿಳಿದರೂ ಕೇಳಿದೆ. ಮೊದಲು ಆಗುವುದಿಲ್ಲವೆಂದರೂ ಹತ್ತಿಸಿಕೊಂಡ. ನಿಲ್ಲಲು ಜಾಗ ಹುಡುಕಬೇಕಾಯಿತು. ವಕ್ರವಕ್ರವಾಗಿ ನಿಂತ ಜನ. ಬಸ್ಸಿನ ತುಂಬ ತಮಿಳರು. ಒಂದೇ ಸಮನೇ ಮಾತಾಡುತ್ತಿದ್ದರು. ತಮಿಳರು ಮೌನವಾಗಿರುವುದೇ ಕಮ್ಮಿ. ಆದರೆ ಇಂಥವರ ನಡುವೆಯೂ ಒಬ್ಬ ರಾಜಾಜಿ, ಒಬ್ಬ ಕಾಮರಾಜ್ ಹೆಚ್ಚು ಮೌನಿಗಳಾಗಿರುವುದರ ಮೂಲಕವೇ ಅದೇ ಕೂಗಾಟದ ಮುಂದಿಗೆ ಪ್ರಿಯರಾದರು. ಇಲ್ಲಿ ಪ್ರಿಯ ಮತ್ತು ಅಪ್ರಿಯವನ್ನು ವಿವರಿಸುವುದು ಕಷ್ಟ. ಆದರೆ ಒಂದು ಅಪ್ರಿಯವಾದ ಸಂಗತಿಯನ್ನು ಹೇಳುವುದು ಅನಿವಾರ್ಯವೆನ್ನಿಸುತ್ತೆ.

ಮೌನವನ್ನು ರೂಢಿಸಿಕೊಳ್ಳಲು ಗಾಢವಾದ ಮನಸ್ಸಿನ ಭಾಷೆಯೊಂದು ಪ್ರತಿಯೊಬ್ಬನಿಗೂ ಬೇಕಾಗುತ್ತೆ. ಇದಿಲ್ಲದಿದ್ದಾಗ ನಮ್ಮ ಕೂಗಾಟ ಕೂಡ ಪರಿಸರಕ್ಕೆ ಹಿಂಸೆಯೇ ಆಗಿರುತ್ತೆ ಎಂಬುದು ತಕ್ಷಣ ಹೊಳೆಯಿತು ನನ್ನ ಸುತ್ತಲಿನ ಪ್ರಯಾಣಿಕರನು ಕಂಡು, ನನಗಿಂತ ಹೆಚ್ಚಾಗಿ ಮುಂದಿನ ಸೀಟಿನಲ್ಲಿ ಕೂತಿದ್ದ ಇಬ್ಬರು ಫ್ರೆಂಚ್ ಪ್ರಯಾಣಿಕರಿಗೆ ಹಿಂಸೆಯಾಗುತ್ತಿತ್ತು ಎಂದು ಕಾಣುತ್ತೆ. ಕಿವಿಗೆ ಕಾಗದ ಚೂರುಗಳನ್ನು ಮಡಿಚಿ ಪರಿಸರದ ಶಬ್ದಮಾಲಿನ್ಯದಿಂದ ಬಿಡುಗಡೆಯಾಗಲು ಪ್ರಯತ್ನಿಸುತ್ತಿದ್ದರು. ಇದೂ ಕೂಡ ಈ ತಮಿಳರಿಗೆ ನಗೆಗೆ ವಸ್ತುವಾಗಿತ್ತು. ಇದರ ಜೊತೆಗೆ ಆ ಫ್ರೆಂಚ್ ಪ್ರಯಾಣಿಕನ ಬೆನ್ನಿಗೊತ್ತಿ ನಿಲ್ಲುವುದು ಅವರು ಪ್ರತಿಭಟಿಸಿದಾಗ ; ತಮಿಳಿನಲ್ಲಿ ಬಯ್ಯುವುದು ನಡೆದಿತ್ತು. ನನಗೂ ಒಂದು ರೀತಿಯ ಹಿಂಸೆಯಾಗತೊಡಗಿತು. ಪ್ರತಿಭಟಿಸಿದೆ, ಸ್ವಲ್ಪ ಸಮಯ ಸುಮ್ಮನಾದರು, ಬೆಂಗಳೂರಿನಿಂದ ಹೊರವಲಯಕ್ಕೆ ಹೋದಾಗ, ತಮಿಳು ಚಿತ್ರಗೀತೆಗಳನ್ನು ಹಾಕತೊಡಗಿದರು. ಐದಾರು ಧ್ವನಿಪೆಟ್ಟಿಗೆಗಳನ್ನು ಜೋಡಿಸಿದ್ದರಿಂದ ಒಟ್ಟು ಶಬ್ದ ಮತ್ತಷ್ಟು ಹಿಂಸೆಯನ್ನು ಕೊಡತೊಡಗಿತ್ತು. ಧ್ವನಿ ತಗ್ಗಿಸಲು ಸೂಚಿಸಿದೆ. ಸಿಡಿಮಿಡಿಗೊಂಡರು. ಆದರೆ ಅವರ ಸಿಟ್ಟು ಯಾವುದರಿಂದ ಪೂರಕವಾದದ್ದು ಎಂದು ನಿರ್ಧರಿಸುವುದು ಕಷ್ಟವಾಗಿದ್ದರೂ ; ವ್ಯಾಪಾರಿ ಚಲನ ಚಿತ್ರಗಳು ಮನುಷ್ಯ-ಮನುಷ್ಯರ ನಡುವಿನ ಅಂತಃ ಸಂಬಂಧವನ್ನೇ ಕಿತ್ತಾಕುತ್ತಿದೆ ಎಂಬುದನ್ನು ಮರೆಯುವಂತಿಲ್ಲ. ಇದಕ್ಕೆ ಕನ್ನಡದ ಚಲನಚಿತ್ರ ಭಕ್ತರೇನೂ ಅಪವಾದವಲ್ಲ.

ಪಾಂಡಿಚೆರಿಗೆ ಹೋಗುತ್ತಿದ್ದ ಆ ಬಸ್ಸಿನಿಂದಿಳಿದಾಗ ಆರಾಮ ಅನ್ನಿಸಿತು. ಆದರೆ ಆ ಫ್ರೆಂಚ್ ಪ್ರಯಾಣಿಕರು ಇದೇ ರೀತಿಯ ಹಿಂಸೆಯಲ್ಲಿ ಅರವಿಂದಾಶ್ರಮಕ್ಕೆ ತಲುಪ

ಬಹುದು. ಆಗ ಬಸ್ಸಿನಲ್ಲಿಯ ಎಲ್ಲಾ ಕಷ್ಟಗಳನ್ನು ಮರೆಯಲು ಧ್ಯಾನಾಸಕ್ತರಾಗಿ ಕೂರ ಬಹುದು. ಬಸ್ಸಿಳಿದು ಸ್ವಲ್ಪದೂರದಲ್ಲಿದ್ದ ಬಸ್‌ಸ್ಟಾಪಿಗೆ ಬಂದೆ. ನಾನು ಅಲ್ಲಿಂದ ಇಪ್ಪತ್ತು ಕಿ. ಮೀಟರು ಮುಂದೆ ಹೋಗಬೇಕಾಗಿತ್ತು. ಎಲ್ಲವೂ ತಮಿಳುಮಯ ವಾಗಿತ್ತು ಅಲ್ಲಿಯ ವಾತಾವರಣ. ನಾನು ಹೋಗಬೇಕಾದ ಕಡೆಗೆ ಯಾವ ಬಸು ಹೋಗುತ್ತದೆಂದು ಕೇಳಲು ಕಷ್ಟವಾಯಿತು. ತೆಲುಗು ಪ್ರದೇಶವಾಗಿದ್ದ ಅದು ಇಂದು ಪೂರ್ಣ ತಮಿಳು ಆಕ್ರಮಿಸಿಕೊಂಡಿದೆ. ಇನ್ನು ಹತ್ತು-ಇಪ್ಪತ್ತು ವರ್ಷಗಳಲ್ಲಿ ತೆಲುಗು ಮನೆಮಾತಾಗಿಯೂ ಉಳಿಯದೇ ಹೋಗಬಹುದು. ಶೇಕಡಾ ಇಪ್ಪತ್ತೈದರಷ್ಟು ಕನ್ನಡ ಮಾತಾಡುವ ಮಂದಿಯೂ ತಮ್ಮ ಮಾತೃಭಾಷೆಯಿಂದ ವಂಚಿತರಾಗಬಹುದು. ಯಾಕೆಂದರೆ ಈಗಾಗಲೇ ತಮಿಳು ಮಾಧ್ಯಮಕ್ಕೆ ತಮ್ಮನ್ನು ಒಗ್ಗಿಸಿಕೊಳ್ಳುತ್ತಿದ್ದಾರೆ. ಕೇವಲ ಸರ್ಕಾರ ಕೊಡುವ ಕೂಲಿಯ ಕೆಲಸಕ್ಕಾಗಿ ಒಂದು ಭಾಷೆಯ ಮೂಲಕ ಸಿಕ್ಕಿರುವ ಏನೆಲ್ಲ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಿದ್ದೇವೆ ಎಂಬುದು ಗೊತ್ತೇ ಇಲ್ಲ. ಇದನ್ನೆಲ್ಲ ಯೋಚಿಸಿದಾಗ ಎಲ್ಲಿ ಭಾಷೆ-ಭಾಷೆಯ ನಡುವಿನ ಸಂಬಂಧ ವನ್ನು ಹೆಚ್ಚಿಸಿಕೊಳ್ಳುತ್ತಿದ್ದೇವೆಯೋ ಅಥವಾ ಕಳೆದುಕೊಳ್ಳುತ್ತಿದ್ದೇವೆಯೋ ಎಂಬು ದನ್ನು ತೀವ್ರವಾಗಿ ಯೋಚಿಸಬೇಕಾಗಿದೆ. ಅಥವಾ ಇಡೀ ನನ್ನ ಬಾಲ್ಯ ಈ ಪ್ರದೇಶ ದಲ್ಲಿ ಸುತ್ತಾಡಿರುವುದರಿಂದ ಅದರಿಂದ ಭಾವನಾತ್ಮಕವಾಗಿ ಬಿಡಿಸಿಕೊಳ್ಳಲಾಗದೆ ಪರ ದಾಡುತ್ತಿದ್ದೇನೆಯೋ ಅನ್ನಿಸುತ್ತೆ. ತೀರ್ಮಾನ ಕೊಡುವ ನಾಯಕರು ಯಾರಾಗ ಬೇಕು. ಇದರಲ್ಲಿ ರಾಜಕೀಯದ ಪಾಲೆಷ್ಟು-ಒಂದು-ಭಾಷಾ ಸಂಸ್ಕೃತಿಯ ಪಾಲೆಷ್ಟು ಎಂಬುದು ಎಲ್ಲರನ್ನು ಕಾಡುವ ಸಮಸ್ಯೆಯಾಗಿಯೇ ಉಳಿಯಬಹುದು. ಎಷ್ಟೋ ಬಾರಿ ನಮ್ಮ ಮುಂದೆ ಕೂರುವ ವಿದ್ಯಾರ್ಥಿಗಳು ಈ ಭಾಷೆಯ ಸಂಬಂಧದಷ್ಟೇ ಅರ್ಥ ವಾಗುವುದಿಲ್ಲ. ಆದರೆ ಅರ್ಥಮಾಡಿಕೊಳ್ಳದಿದ್ದರೆ ಯಾಕೆ ಅವರ ಮುಂದೆ ನಿಲ್ಲಬೇಕು ಅನ್ನಿಸುತ್ತೆ. ಈ ದೃಷ್ಟಿಯಿಂದ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರ ಸಂಬಂಧ ಎಂದಾಗ ಸಿಡ್ನಿ ಪಾಯಿಟರ್ ನಟಿಸಿರುವ 'ದಿ ಸರ್ ವಿಥ್ ಲವ್' ಚಿತ್ರವನ್ನು ನೆನಪು ಮಾಡಿಕೊಳ್ಳುತ್ತೇನೆ. ಬಿಳಿಯ ವಿದ್ಯಾರ್ಥಿಗಳನ್ನು ಅರ್ಥಮಾಡಿಕೊಳ್ಳಲು ; ಅದರಲ್ಲೂ ವರ್ಣದ್ವೇಷ ಭೀಕರ ಸ್ವರೂಪವನ್ನು ತಾಳುತ್ತಿದೆ ಎಂಬುದನ್ನು ತಿಳಿದಾಗ ತೆಗೆದ ಚಿತ್ರ. ಸಿಡ್ನಿ ಪಾಯಿಟರ್ ನಿಗ್ರೋ ಜನಾಂಗದಿಂದ ಬಂದ ಅತ್ಯುತ್ತಮ ನಟ. ಆತ ಮಕ್ಕಳಲ್ಲಿ ಈಗಾಗಲೇ ಮನೆಮಾಡಿಕೊಂಡಿದ್ದ ವರ್ಣದ್ವೇಷವನ್ನು ಕಿತ್ತಾಕಲು ಪ್ರಯತ್ನಿಸುತ್ತಾನೆ.

1969ರಲ್ಲಿ ಈ ಚಿತ್ರವನ್ನು ನೋಡಿದಾಗ ಭಾವುಕನಾಗಿದ್ದೆ. ನಂತರ ಮರೆತು ಬಿಟ್ಟಿದ್ದೆ. ಆದರೆ ಅದರ ಒಂದು ವರ್ಷದ ನಂತರ ನನ್ನ ಆನರ್ಸ್ ದಿನಗಳಲ್ಲಿ ನನಗೆ ಪ್ರಿಯರಾದ ಅಧ್ಯಾಪಕರೊಬ್ಬರ ಪಾಠ ನಡೆದಿತ್ತು. ನಾವು ಹೆಚ್ಚು ತುಂಟರಾಗಿದ್ದರಿಂದ ಸ್ವಲ್ಪ ಗಲಾಟೆ ಜಾಸ್ತಿ ಮಾಡುತ್ತಿದ್ದೆವು. ಪಾಠ ಬೋರ್ ಆದಾಗ, ಆಗ ನನ್ನ ಗೆಳೆಯ ನೊಬ್ಬ ನಾಯಿಯ ಮರಿಯ ರೀತಿಯಲ್ಲಿ 'ಕ್ಯುಂಯ್ ಕ್ಯುಂಯ್' ಎಂದ. ಅಧ್ಯಾ

ಪಕರು ಸಿಟ್ಟಾದರು. "ನೀವೆಲ್ಲ ನಾಯಿಗೆ ಹುಟ್ಟಿದವರು" ಎಂದರು. ಎಲ್ಲಾ ವಿದ್ಯಾರ್ಥಿಗಳು ಪ್ರತಿಭಟಿಸಿದರು. ತರಗತಿ ಬಿಟ್ಟು ಹೊರಗೆ ಹೋದರು. ಮಾರನೆ ದಿನ ನಾವ್ಯಾರು ತರಗತಿಗೆ ಹೋಗಲಿಲ್ಲ. ಆದರೆ ಮರುದಿನ ಹೋದಾಗ, ಆ ಅಧ್ಯಾಪಕರ ಮುಖದ ತುಂಬ ವಿಷಾದ ತುಂಬಿತ್ತು. ಪಾಠ ಶುರು ಮಾಡುವ ಮುನ್ನ ವಿದ್ಯಾರ್ಥಿಗಳ ಮುಂದೆ ಕ್ಷಮೆ ಕೇಳಿದರು, ನಂತರ "ನಿನ್ನೆ ನಾನು 'ಟು ಸರ್ ವಿಥ್ ಲವ್' ಚಿತ್ರವನ್ನು ನೋಡಿದೆ. ನನ್ನ ಮನಸ್ಸಿನ ಮೇಲೆ ತುಂಬ ಪರಿಣಾಮ ಬೀರಿತು. ನಿಮ್ಮ ಕ್ಷಮೆ ಕೇಳಬೇಕೆನ್ನಿಸಿತು," ಎಂದಾಗ ನಾವೆಲ್ಲ ಅಪರಾಧಿಗಳಂತೆ ಕೂತಿದ್ದೆವು. ಇದಾದ ನಂತರ ಅವರಿಗೆ ಎಲ್ಲಾ ವಿದ್ಯಾರ್ಥಿಗಳು ಹತ್ತಿರವಾದರು. ಈಗ ಅವರು ಸಿಕ್ಕಿದಾಗಲೆಲ್ಲ ನನಗೆ ಸಿಡ್ನಿ ಪಾಯಿಟ್‌ರ ನೆನಪಾಗುತ್ತಾನೆ. ಅಥವಾ ಸಿಡ್ನಿ ಪಾಯಿಟಿರ್‌ನ ಬೇರೆ ಚಿತ್ರಗಳನ್ನು ನೋಡುವಾಗಲೂ ಅಲ್ಲಿ 'ಸರ್'ನನ್ನೂ ಹುಡುಕುತ್ತೇನೆ. ಈ ರೀತಿಯ 'ಸರ್' ಮತ್ತು 'ಲವ್' ಸಂಬಂಧಗಳು ಮನುಷ್ಯನ ಜೀವವಾಹಿನಿಯಲ್ಲಿ ನಡೆಯುತ್ತಲೇ ಇರುತ್ತದೆ.

ಹದಿನೈದು ದಿನಗಳ ಹಿಂದೆ, ಮಧ್ಯಾಹ್ನ ಮೂರು ಗಂಟೆಯ ಸಮಯ. ಇಂಡಿಯನ್ ಗ್ಯಾರೇಜ್ ಬಳಿಯ ಸ್ಟಾಪ್‌ನಲ್ಲಿ ಬಸ್ಸಿಗಾಗಿ ಕಾಯುತ್ತಿದ್ದೆ. ಸ್ಟೇಸಿ ಶಾಲೆಯ ಮಕ್ಕಳೂ ಬಸ್ಸಿಗಾಗಿ ಕಾಯುತ್ತಿದ್ದರು. ಕಾಯುತ್ತಲೇ ಆಟವಾಡುತ್ತಿದ್ದರು. ಅವರಲ್ಲಿ ಕೆಲವುಪುಟ್ಟ ಹುಡುಗರು ಬಸ್ ಸ್ಟಾಪಿನ ರಾಡ್‌ಗಳನ್ನು ಹಿಡಿದುಕೊಂಡು ನೇತಾಡುತ್ತಿದ್ದರು. ತಮ್ಮನ್ನು ತಾವು ಮರೆತುನೇತಾಡುತ್ತಿದ್ದ ಕ್ರಮವನ್ನೇ ನೋಡುತ್ತ ನಿಂತಿದ್ದೆ. ಅವರ ಸಂತೋಷದಲ್ಲಿ ನಾನು ಭಾಗಿಯಾಗಿದ್ದೆ ಸ್ವಲ್ಪಮಟ್ಟಿಗೆ. ನನ್ನ ಪಕ್ಕದಲ್ಲಿ ನಿಂತಿದ್ದ ಮಧ್ಯಮ ವರ್ಗದ ಕಪ್ಪು ಹೆಂಗಸು ತನ್ನ ಮಗನ ಜೊತೆಯಲ್ಲಿ ನಿಂತಿದ್ದಳು. ವಿಕಾರವಾಗಿ ಬಬಲ್‌ಗಮ್ ತಿನ್ನುತ್ತ, ಬಬುಲ್ಸ್‌ನ್ನು ಬಿಡುತ್ತಿದ್ದಳು. ಅದರಿಂದ ಆಕೆ ಅಸಹ್ಯವಾಗಿ ಕಾಣತೊಡಗಿದ್ದಳು.

ಆ ಮಕ್ಕಳು ನೇತಾಡುತ್ತಲೇ ಇದ್ದರು. ಆ ಕಡೆಯಿಂದ ಆಂಗ್ಲೋ ಇಂಡಿಯನ್ ಮುದುಕಿಯೊಬ್ಬಳು ಬಂದಳು. ಆಕೆ ಬಂದದ್ದನ್ನು ನಾನೂ ಗಮನಿಸಲಿಲ್ಲ. ಆ ಮುದುಕಿ ಸಿಟ್ಟಿನಿಂದ ಸಿಡಿದು ನಿಂತಳು. ಹುಡುಗ ಕೆಳಕ್ಕೆ ಬಿದ್ದ. ನೋವನ್ನು ಲೆಕ್ಕಿಸದೆ ದೂರ ಹೋಗಿ ಗುಬ್ಬಚ್ಚಿ ಮರಿಯ ರೀತಿಯಲ್ಲಿ ಬೇರೆ ಹುಡುಗರ ನಡುವೆ ಅವಿತುಕೊಂಡ. ಆದರೆ ಆ ಮುದುಕಿ ನನ್ನ ಹೆಗಲ ಮೇಲೆ ಕೈ ಹಾಕಿ "ನೋಡು, ನಮ್ಮ ಕಾಲದಲ್ಲಿ ನಾವು ಇಷ್ಟು ಕೆಟ್ಟರಲಿಲ್ಲ. ಈಗಿನ ಹುಡುಗರು ಎಷ್ಟು ಹಾಳಾಗಿದ್ದಾರೆ ಇನ್ನು ಕೆಲವು ದಿನ ಹೋದರೆ ಇವರು ಯಾರ ಕೈಗೂ ಸಿಗುವುದಿಲ್ಲ," ಎಂದಾಗ ಆಕೆಯ ಸುಕ್ಕುಗಟ್ಟಿದ ಮುಖದಲ್ಲಿ ಏನನ್ನೋ ಹುಡುಕಲು ತೊಡಗಿದ್ದೆ.

ಆಕೆ ನನ್ನಿಂದ ಬಹುಮುಂದೆ ಹೋಗಿದ್ದಳು. ಆಕೆಯನ್ನು ನಿಲ್ಲಿಸಿ ಬಹಳಷ್ಟು ಕೇಳಬಹುದೆಂದು ಯೋಚಿಸುವ ಮುನ್ನ ಹೊರಟಿದ್ದಳು. ಆದರೆ ಆಕೆಯ ಮಾತು "ಇನ್ನು ಕೆಲವು ದಿನ ಇವರು ಯಾರ ಕೈಗೂ ಸಿಗುವುದಿಲ್ಲ," ಎಂಬ ವಾಕ್ಯ ಧ್ವನಿಯೆತ್ತರಿಸಿ ಮತ್ತೆ ಮತ್ತೆ ಹೇಳಿದಂತಿತ್ತು. ಆ ಮಾತಿನ ಅರ್ಥ ಸಾಧ್ಯತೆಗಳು ಒಗಟಿನ ರೂಪದಲ್ಲಿಯೇ ಇದ್ದರೂ; ಎಲ್ಲಾ ಶಿಕ್ಷಣದ ಉದ್ದೇಶವೂ ಮನುಷ್ಯ ಬದುಕಲು ಆಗಬೇಕಲ್ಲವೇ ? ಆದಾಗದಿದ್ದಾಗ ಎಲ್ಲಾ ವೈಪರೀತ್ಯಗಳಂತೆ ಇದೂ ಒಂದು ಎಂದು ಸುಮ್ಮನಾಗಿಬಿಡಬೇಕೆ ? ಎಂದುಕೊಂಡರೂ ನಮ್ಮ ಬೆನ್ನು ಹಿಂದೆ ಬರುವ ನೆನಪು; ಆ ಆಂಗ್ಲ ನುಡುಕಿಯಂತೆ ಇನ್ನೂ ಮೂವತ್ತು–ನಲವತ್ತು ವರ್ಷಗಳ ನಂತರ ನನ್ನ ಬಾಯಿಂದಲೂ ಹೇಳಿಸಬಹುದೇ ಎಂಬ ಭಯದ ಜೊತೆಗೆ ಅಥವಾ ಇಂದೇ ಹೇಳಿಬಿಡುವ ಸಿದ್ಧತೆಯಲ್ಲಿದ್ದೇವೆಯೋ ಅನ್ನಿಸುತ್ತಿದೆ. ●

ದಿನಾಂಕ : 11-2-84 — ಶೂದ್ರ ಶ್ರೀನಿವಾಸ್

## ಕಲಾಮೇಳ :—ಕರ್ನಾಟಕದ ಕಲೆಗೆ ಪುನರುಜ್ಜೀವನ

—ಚಿ. ಸು. ಕೃಷ್ಣ ಸೆಟ್ಟಿ

ಜನಸಾಮಾನ್ಯರಲ್ಲಿ ಕಲೆಯ ಬಗ್ಗೆ ಹೆಚ್ಚಿನ ಅರಿವು ಮೂಡಿಸುವ ಹಾಗೂ ಕಲೆಯನ್ನು ಜನಪರವಾಗಿಸುವ ಮಾತು ಕಲಾಕ್ಷೇತ್ರದಲ್ಲಿ ಇಂದು ಹೆಚ್ಚು ಹೆಚ್ಚಾಗಿ ಕೇಳಿಬರುತ್ತಿದೆ. ಜನಸಾಮಾನ್ಯರು ಮತ್ತು ಕಲೆಯ ನಡುವೆ ಹೆಚ್ಚುತ್ತಿರುವ ಅಂತರ ಕಲಾವಿದರನ್ನು ಜಾಗೃತಗೊಳಿಸಿದೆ. ಹೀಗಾಗಿ ಈ ದಿಸೆಯಲ್ಲಿ ಕಲಾವಿದರೇ ಬೇರೆ ಬೇರೆ ಜನಪದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುವುದನ್ನು ಇತ್ತೀಚೆಗೆ ಕಾಣುತ್ತಿದ್ದೇವೆ. ನಮ್ಮ ದೃಶ್ಯಕಲಾ ಸಂಸ್ಕೃತಿಯು ಅವನತಿಗಿಳಿಯುತ್ತಿರುವ ಈ ಸಂದರ್ಭದಲ್ಲಿ ಇದು ಐತಿಹಾಸಿಕ ಅನಿವಾರ್ಯ ಕೂಡಾ ಹೌದು. ಕಳೆದ ನವೆಂಬರ್ 27 ರಿಂದ ಡಿಸೆಂಬರ್ 4ರ ವರೆಗೆ ಬೆಂಗಳೂರಿನ ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ನಡೆದ ಮೂರನೆಯ ಕರ್ನಾಟಕ ಕಲಾಮೇಳ ಈ ದಿಸೆಯಲ್ಲಿ ಒಂದು ದಿಟ್ಟ ಪ್ರಯತ್ನ. ಈ ಕಲಾಮೇಳದ ಉದ್ದೇಶ ಕಲೆಯನ್ನು ಜನಪರವಾಗಿಸುವುದಷ್ಟಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಎಲ್ಲ ಲಲಿತಕಲೆಗಳ ಮೂಲ ಸೆಲೆ ಒಂದೇ. ಅಂತೆಯೇ ಚಿತ್ರಕಲೆ,

---

ಒಂದು ವರದಿ

ಶಿಲ್ಪಕಲೆ, ಸಾಹಿತ್ಯ, ರಂಗಭೂಮಿ ಮುಂತಾದ ಸೃಜನಶೀಲ ಅಭಿವ್ಯಕ್ತ ಮಾಧ್ಯಮ ಗಳ ನಡುವಣ ಸಂಬಂಧವನ್ನು ದೃಢವಾಗಿ ಬೆಳೆಸುವ ಉದ್ದೇಶವೂ ಈ ಕಲಾ ಮೇಳಕ್ಕಿತ್ತು.

ಹಲವಾರು ವಿಶೇಷಗಳಿಂದಾಗಿ ಕಲಾಮೇಳ ಎಲ್ಲರ ನೆನಪಿನಲ್ಲುಳಿಯುವಂತಾದ್ದು. ಜನತೆಯನ್ನು ಸ್ವಾಗತಿಸುವಲ್ಲಿಯೂ ಕಲಾಮೇಳದ ರೀತಿ ವಿಭಿನ್ನ. ಜನರಿಗಾಗಿಯೇ ನಡೆಯುತ್ತಿರುವ ಈ ಕಾರ್ಯಕ್ರಮಕ್ಕೆ ಸ್ವಾಗತ ಕೋರಲು ಅದು ಹಾಕಿಕೊಂಡದ್ದು ಮೆರವಣಿಗೆ. ಸೃಜನಶೀಲ ಕೊಲಾಜ್ ಭಿತ್ತಿಪತ್ರಗಳೊಂದಿಗೆ ನಡೆದ ಈ ಸಾಂಸ್ಕೃತಿಕ ಮೆರವಣಿಗೆಯ ಮುಂಚೂಣಿಯಲ್ಲಿ ತರೀಕೆರೆಯ ಬಾಪೂಜಿ ಯುವಕ ಸಂಘದವರ ವೀರಗಾಸೆ ಕುಣಿತ, ಜಾನಪದ ವಾದ್ಯಗಳೊಂದಿಗೆ ಕುಣಿಯುತ್ತಾ ನಡೆದ ವೇಷ ಧಾರಿಗಳು. ಹಿಂದೆ, ಕಲಾಮೇಳದಲ್ಲಿ ಭಾಗವಹಿಸುವ ಕಲಾವಿದರು, ಇತರ ಕಲಾಭಿ ಮಾನಿಗಳು ಮೆರವಣಿಗೆಯಲ್ಲಿದ್ದರು. ಇದರೊಂದಿಗೆ ಮುಂದುಗಡೆ ಕಲಾಮೇಳಕ್ಕೆ ಬನ್ನಿ ಎಂದು ಆತ್ಮೀಯವಾಗಿ ಕರೆಯುವ ಫಲಕ. ಇದು ಆಹ್ವಾನದ ರೀತಿ.

ಆ ಎಂಟೂ ದಿನಗಳು ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ನಿಜವಾದ ಅರ್ಥ ದಲ್ಲಿ ಕಲೆಯ ಮೇಳ ನಡೆಯಿತು. ಅದು, ಇಂದು ಕಲೆಯೆಂದು ಕರೆಯಬಹುದಾದು ದೆಲ್ಲವುಗಳ focal point ಆಗಿತ್ತು. ರಾಜ್ಯದ ಕಲಾಸಮೂಹದ ಕೆನೆಯ ರಸ ಗಟ್ಟಿಯೇ ಅಲ್ಲಿತ್ತು. ರಾಜ್ಯದ ಸಮಕಾಲೀನ ಕಲೆಯ ಬೆಳವಣಿಗೆಯನ್ನು ಪ್ರತಿ ಬಿಂಬಿಸುವ ಕಲಾಪ್ರದರ್ಶನ, ಕಲಾವಿದರ ಶಿಬಿರ, ವಿಚಾರಗೋಷ್ಠಿಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು, ಕಲಾಪುಸ್ತಕಗಳ ಪ್ರದರ್ಶನ ಮತ್ತು ಮಾರಾಟ. ಹೀಗೆ ಹತ್ತು ಹಲವು ಕಾರ್ಯಕ್ರಮಗಳೊಂದಿಗೆ ಆ ಪ್ರದೇಶ ಚಟುವಟಿಕೆಯಿಂದ ಕೂಡಿತ್ತು. ಅಖಿಲ ಕರ್ನಾಟಕದ ವಿವಿಧ ಭಾಗಗಳಿಂದ ಬಂದಿದ್ದ ಎಪ್ಪತ್ತೈದು ಕ್ರಿಯಾಶೀಲ ಕಲಾ ವಿದರು, ಏಳು ಪ್ರಮುಖ ಕಲಾ ಸಂಸ್ಥೆಗಳು ಭಾಗವಹಿಸಿದ್ದ ಈ ಕಲಾಮೇಳದಲ್ಲಿ 'ಪ್ರವೇಶದ ಹಕ್ಕನ್ನು ಕಾದಿರಿಸಲಾಗಿದೆ' ಎಂಬ ನಾಮಫಲಕವಾಗಿರಲಿಲ್ಲ. ಎಲ್ಲ ಶೈಲಿಗಳ, ಪಂಗಡಗಳ, ಎಲ್ಲ ಮಾಧ್ಯಮಗಳ ಕಲಾವಿದರೂ ಮುಕ್ತ ಮನಸ್ಸಿನಿಂದ ಭಾಗವಹಿಸಿದ್ದರು. ಕಬ್ಬನ್‌ಪಾರ್ಕಿನ ಹಸಿರು ವರ್ಣಮಯ ಹಿನ್ನೆಲೆಯಲ್ಲಿ ನಡೆದ ಈ ಕಲಾಮೇಳದಲ್ಲಿ ಕಲಾಭಿಮಾನಿಗಳೂ ಉತ್ಸುಕತೆಯಿಂದ ಭಾಗವಹಿಸಿದ್ದರು. ಪ್ರತಿ ನಿತ್ಯ ಬೆಳಗ್ಗೆಯಿಂದ ಸಂಜೆಯವರೆಗೆ ಕಲಾವಿದರು ಕಲಾಕೃತಿಗಳನ್ನು ರಚಿಸುತ್ತಿದ್ದುದ ರಿಂದ ಸೃಜನಶೀಲ ಕಲಾಕೃತಿಯ ನಿರ್ಮಾಣದ ವಿವಿಧ ಹಂತಗಳನ್ನು, ತಂತ್ರಗಳನ್ನು ವೀಕ್ಷಿಸುವ ಅಪೂರ್ವ ಅವಕಾಶ ಕಲಾಭಿಮಾನಿಗಳಿಗೆ ದೊರೆಯಿತು. ಈ ಎಂಟು ದಿನಗಳ ಅವಧಿಯಲ್ಲಿ ವಿವಿಧ ಶೈಲಿ, ವಿವಿಧ ಮಾಧ್ಯಮಗಳು ಹಾಗೂ ತಂತ್ರಗಳ 80ಕ್ಕೂ ಹೆಚ್ಚಿನ ಕಲಾಕೃತಿಗಳ ಸೃಷ್ಟಿ ಈ ಕಲಾವಿದರ ಶಿಬಿರದಲ್ಲಿ ಆಯಿತು.

ಈ ಕಲಾಮೇಳದ ಚಟುವಟಿಕೆಗಳಿಗೆ ಕಲಶವಿಟ್ಟಂತೆ ಅಂತರ ರಾಷ್ಟ್ರೀಯ ಖ್ಯಾತಿಯ ಕಲಾವಿದ ಹುಸೇನ್ ಅವರು ಕಲಾಮೇಳದಲ್ಲಿ ಭಾಗವಹಿಸಿದರು. ಕರ್ನಾಟಕದ ಯುವ ಕಲಾವಿದರು ಕಲಾಕೃತಿ ರಚಿಸುವುದನ್ನು ವೀಕ್ಷಿಸಿದರು ; ಕಲಾವಿದರೊಂದಿಗೆ ಅನೇಕ ವಿಷಯುಗಳನ್ನು ಕುರಿತು ಚರ್ಚಿಸಿದರು. ಪ್ರತಿದಿನ ಸಂಜೆ ನಡೆಯುತ್ತಿದ್ದ ಸಾಂಸ್ಕೃತಿಕ ಕಾರ್ಯಕ್ರಮುಗಳನ್ನು ವೀಕ್ಷಿಸಿದರಲ್ಲದೆ, ಪಾಲ್ಘಾಟ್ ಮಣಿ ಅಯ್ಯರ್ ಕಲಾಕೇಂದ್ರದವರ ತಾಳವಾದ್ಯ ಕಛೇರಿಗೆ ಮಾರುಹೋಗಿ, ನಂತರ ಅದೇ ಕಾರ್ಯಕ್ರಮವನ್ನು ಮತ್ತೊಮ್ಮೆ ವಿಂಡ್ಸರ್ ಮ್ಯಾನರ್ ಹೋಟೆಲ್‌ನಲ್ಲಿ ಏರ್ಪಡಿಸಿದರು. ಅಷ್ಟೇ ಅಲ್ಲ, ನಮ್ಮೆಲ್ಲರ ಕೋರಿಕೆಯ ಮೇಲೆ ಕಲಾಮೇಳಕ್ಕೆ 'ಲವ ಕುಶ' ಕಲಾಕೃತಿಯೊಂದನ್ನು ರಚಿಸಿಕೊಟ್ಟರು. ಹುಸೇನ್ ಅವರು ಈ ಕೃತಿಯನ್ನು ರಚಿಸುವುದನ್ನು ವೀಕ್ಷಿಸುವ ಅವಕಾಶ ಮಾಡಿಕೊಟ್ಟಿದ್ದು ಕಲಾಭಿಮಾನಿಗಳಿಗೆ ಕಲಾಮೇಳ ನೀಡಿದ ವಿಶೇಷ ಕೊಡುಗೆ. ಕಲಾಮೇಳದ ನೆನಪಿಗಾಗಿ ವಿಶೇಷ ಕ್ಯಾಲೆಂಡರ್ ಮಾಡುವುದಾಗಿ ತಿಳಿಸಿದಾಗ ಹುಸೇನ್ ಅದಕ್ಕಾಗಿಯೂ ಚಿತ್ರವೊಂದನ್ನು ರಚಿಸಿಕೊಟ್ಟರು. ಒಟ್ಟಿನಲ್ಲಿ ಹುಸೇನ್ ಈ ಕಲಾಮೇಳಕ್ಕೆ ವಿಶೇಷ ಶೋಭೆ ತಂದರು.

ಚಿತ್ರಕಲೆ ಹಾಗೂ ಸಾಹಿತ್ಯ, ರಂಗಭೂಮಿ ಮುಂತಾದ ಇತರ ಮಾಧ್ಯಮಗಳ ನಡುವಣ ಸಂಬಂಧವನ್ನು ಬೆಳೆಸುವುದೂ ಕಲಾಮೇಳದ ಉದ್ದೇಶವಾದುದರಿಂದ ಪ್ರತಿನಿತ್ಯ ಸಂಜೆ ವಿಚಾರಗೋಷ್ಠಿಗಳು ನಡೆಯುತ್ತಿದ್ದವು. ಕಲೆ ಮತ್ತು ಇತರ ಮಾಧ್ಯಮಗಳ ಸಂಬಂಧ ಕುರಿತು ಈ ವಿಚಾರಗೋಷ್ಠಿ ನಡೆದವು. ಶ್ರೀ ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ನಡೆದ ಕವಿಗೋಷ್ಠಿ ಈ ಬಾರಿಯ ವಿಶೇಷಗಳಲ್ಲೊಂದು.

ಕಲಾಕೃತಿಗಳ ಡ್ರಾ ಯೋಜನೆ ಕಲಾಮೇಳದ ವಿಶೇಷ ಆಕರ್ಷಣೆ. ಈ ಯೋಜನೆಯಲ್ಲಿ ಕೆ. ಕೆ. ಹೆಬ್ಬಾರ್, ಎಸ್. ಜಿ. ವಾಸುದೇವ್, ಜಿ. ಎಸ್. ಶಣೈ, ಚಂದ್ರನಾಥ್ ಮುಂತಾದ ಹನ್ನೊಂದು ಕಲಾವಿದರ ಕಲಾಕೃತಿಗಳಿದ್ದು ಇದರ ಕೂಪನ್‌ನ ಬೆಲೆ ಐದು ರೂಪಾಯಿಗಳು. ಈ ಯೋಜನೆಯ ಡ್ರಾ ಎತ್ತಲು ಬಂದ ವಾರ್ತಾ ಸಚಿವ ರಘುಪತಿ ತಾವೂ ಕೂಪನ್ ಕೊಂಡು ಕೃತಿಯೊಂದರ ಒಡೆಯರಾದುದು ಗಮನಾರ್ಹ ಅಂಶ. ಕಲಾಮೇಳದ ನೆನಪನ್ನು ಹಸಿರಾಗಿಸಲು 1984ರ ವಿಶೇಷ ಕ್ಯಾಲೆಂಡರನ್ನು ಬಿಡುಗಡೆ ಮಾಡಲಾಯಿತು. ಸ್ಕ್ರೀನ್ ಪ್ರಿಂಟಿಂಗ್‌ನ ಈ ಕ್ಯಾಲೆಂಡರ್‌ನಲ್ಲಿ ಹುಸೇನ್ ಅವರ ಕೃತಿಯ ಜೊತೆ ಡಾ॥ ಕೆ. ಕೆ. ಹೆಬ್ಬಾರ್, ಜಿ. ಆರ್. ಸಂತೋಷ್ ಅವರ ಕೃತಿಗಳೂ ಇದ್ದವು. ಕಲಾಮೇಳದಲ್ಲಿ ಭಾಗವಹಿಸಿದ ಕಲಾವಿದರೆಲ್ಲರಿಗೆ ಕಲಾಮೇಳದ ಗುರುತುಳ್ಳ ಚೀಲಗಳನ್ನು ನೀಡಿದಾಗ ಕಲಾವಿದರಿಗೆ ಸಂತಸವಾಯಿತು. ಹುಸೇನ್ ಅವರಿಗೆ ಈ ಚೀಲ ತೋರಿಸಿ ಇದನ್ನು ಭಾಗವಹಿಸಿದ

ಎಲ್ಲ ಕಲಾವಿದರಿಗೆ ನೀಡುವವರಿದ್ದೇವೆ ಎಂದು ತಿಳಿಸಿದಾಗ ನಾನು ಕೂಡಾ ಕಲಾ ಮೇಳದಲ್ಲಿ ಭಾಗವಹಿಸಿದ್ದೇನೆ, ಎಲ್ಲರಂತೆ ಕಲಾಕೃತಿಯನ್ನು ರಚಿಸಿದ್ದೇನೆ. ಹಾಗಾಗಿ ನನಗೂ ಕೈಚೀಲ ಕೊಡಿ" ಎಂದ ಹುಸೇನ್ ಆ ಚೀಲವನ್ನು ಬಗಲಿಗೆ ಹಾಕಿಕೊಂಡೇ ನಡೆದರು. ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಅತಿಥಿಗಳಿಗೆ ನೀಡಿದ ಕಾಣಿಕೆಯೂ ವಿಶೇಷ ರೀತಿಯದು. ಕಲಾವಿದರೇ ಸ್ವಹಸ್ತದಿಂದ ನಿರ್ಮಿಸಿದ, ಮೂಲ ಕಲಾಕೃತಿಗಳುಳ್ಳ ವಿಶೇಷ ಕ್ಯಾಲೆಂಡರ್‌ಗಳನ್ನು ಅತಿಥಿಗಳಿಗೆ ನೀಡಲಾಯಿತು. ಹೀಗೆ ಹತ್ತು ಹಲವು ವಿಶೇಷಗಳುಳ್ಳ ಕಲಾಮೇಳದಲ್ಲಿ ಭಾಗವಹಿಸಿದವರೆಲ್ಲರಲ್ಲೂ ತೃಪ್ತಿಯ ನಗೆ ಎದ್ದು ಕಾಣುತ್ತಿತ್ತು.

ಸಂವೇದನಾಶೀಲರಾದ ಕಲಾವಿದರಲ್ಲಿ ಭಿನ್ನಾಭಿಪ್ರಾಯಗಳಿರುವುದು ಸಹಜ. ಆದರೆ ಈ ಕಲಾಮೇಳದಲ್ಲಿ ರಾಜ್ಯದ ಸೃಜನಶೀಲ, ಕ್ರಿಯಾಶೀಲ ಕಲಾವಿದರೆಲ್ಲ ಸಮಕಾಲೀನ ಕಲೆಯನ್ನು ಬೆಳೆಸುವ ಜವಾಬ್ದಾರಿಯೊಂದಿಗೆ ಭಾಗವಹಿಸಿದ್ದರು. ವಿವಿಧತೆಯಲ್ಲಿ ಏಕತೆಯನ್ನು ನಿರ್ಮಿಸಿದ ಈ ಕಲಾಮೇಳ ಕರ್ನಾಟಕದ ಕಲಾಪ್ರಗತಿಯ ಚರಿತ್ರೆಯಲ್ಲೊಂದು ಮೈಲಿಗಲ್ಲಾಯಿತು. ಕರ್ನಾಟಕದ ದೃಶ್ಯಕಲಾ ಸಂಸ್ಕೃತಿಯನ್ನು ಬೆಳೆಸುವ ಜವಾಬ್ದಾರಿಯುಳ್ಳ ಸಮಾನ ಮನೋಭಾವದ, ಸಮಾನ ಧೋರಣೆಯ ಕಲಾವಿದರ ನಿಲುವನ್ನು ಇನ್ನಷ್ಟು ದೃಢಗೊಳಿಸಿತು. ಒಟ್ಟಿನಲ್ಲಿ ಈ ಕಲಾಮೇಳ ಕರ್ನಾಟಕದ ಕಲೆಗೆ ಪುನರುಜ್ಜೀವನ ನೀಡುವ ದಿಸೆಯಲ್ಲಿ ಎಲ್ಲರ ಗಮನ ಸೆಳೆದ ಅಪೂರ್ವ ಕಾರ್ಯಕ್ರಮವೆಂದರೆ ತಪ್ಪಾಗಲಿಕ್ಕಿಲ್ಲ. ●

---

## ಇಲ್ಲದವರು

—ಸಿದ್ಧಾರ್ಥ

1970 ರಲ್ಲಿ ಮೊದಲನೆಯ ಬಾರಿಗೆ ಬೆಂಗಳೂರಿನಲ್ಲಿ ಸತ್ಯಜಿತ್‌ರಾಯ್‌ರವರ ಚಿತ್ರಗಳ ಉತ್ಸವವನ್ನು ನಡೆಸಿದಾಗ; ಅದರ ಜೊತೆಗೆ ಕಿರುಚಿತ್ರಗಳ ಉತ್ಸವದಲ್ಲಿ ನೋಡಿದ ಚಿತ್ರಗಳಲ್ಲಿ ಕೆಲವನ್ನು ಈಗಲೂ ಮರೆಯುವಂತಿಲ್ಲ. ಅವುಗಳಲ್ಲಿ ಒಂದೆರಡು ನಿಮಿಷಗಳ ಕಿರುಚಿತ್ರಗಳಂತೂ; ಎರಡು ಮೂರು ಘಂಟೆಗಳಲ್ಲಿ ಅಭಿವ್ಯಕ್ತಿಸುವಷ್ಟನ್ನು ಹೇಳಿ ನೆನಪಿಗೆ ಸುಳಿವು ಕೊಟ್ಟಿದ್ದುವು.

ಎಲ್ಲರೂ ಕಾದಂಬರಿಗಳನ್ನು ಬರೆಯಲಾಗುವುದಿಲ್ಲ. ಸಣ್ಣ ಕಥೆಗಾರರಾಗಿ ಬೆಳೆಯುವ ಮಂದಿಯೇ ಬೇರೆ. ಕಾದಂಬರಿಕಾರರಾಗಿ ಬೆಳೆಯುವ ಮಂದಿಯೇ ಬೇರೆ. ಈ ದೃಷ್ಟಿಯಿಂದ ಚಿತ್ರಮಾಧ್ಯಮದಲ್ಲಿ ಹೆಚ್ಚು ಸೂಕ್ಷ್ಮಮತಿಗಳಾದವರು ಸಧ್ಯದ ಆರ್ಥಿಕ ದುಸ್ಥಿತಿಯಲ್ಲಿ ಕಿರು ಚಿತ್ರಗಳ ಮೊರೆ ಹೋಗುವುದು ಸೂಕ್ತ ಅನಿಸುತ್ತೆ. ಮಣಿಕೌಲ್‌ರವರಂಥ ಪ್ರಜ್ಞಾವಂತ ನಿರ್ದೇಶಕರು ಕಿರುಚಿತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳುವುದು ಉತ್ತಮ.

ಕರ್ನಾಟಕದಲ್ಲಿ ಕಿರುಚಿತ್ರಗಳ ಬಗ್ಗೆ ಹೆಚ್ಚು ಅಭಿರುಚಿಯನ್ನು ಹೊಂದಿರುವ ಒಂದಷ್ಟು ಗೆಳೆಯರು ಕ್ರಿಯಾಶೀಲರಾಗಿದ್ದಾರೆಂಬುದೇ ಸಂತೋಷದ ವಿಷಯ. ಈ ದೃಷ್ಟಿಯಿಂದ ಎ. ಸಿ. ಆನಂದ್‌ರವರು ನಿರ್ದೇಶಿಸಿದ ಪೇರೆಂಟ್ಸ್, ಪ್ಯಾರಾಸೈಟ್ ಮತ್ತು ಇಲ್ಲದವರು ಚಿತ್ರಗಳು ಗುಣಮಟ್ಟದಲ್ಲಿ ನೋಡುವವರ ಮನಸ್ಸನ್ನು ಹಿಡಿದಿದ್ದಂತಹವು. ಪೇರೆಂಟ್ಸ್ ಈಗಾಗಲೇ ರಾಷ್ಟ್ರೀಯ ಮಟ್ಟದಲ್ಲಿ ಒಂದಷ್ಟು ಪ್ರಶಸ್ತಿಗಳನ್ನು ಪಡೆದಿದೆ. ಈ ಬಾರಿ ಕಲ್ಕತ್ತದಲ್ಲಿ ನಡೆದ ಕಿರುಚಿತ್ರಗಳ ಉತ್ಸವದಲ್ಲಿ 'ಇಲ್ಲದವರು' ಮೂರನೆಯ ಬಹುಮಾನವನ್ನು ಪಡೆದದ್ದು ಸಂತೋಷದ ವಿಷಯ.

ಎಂ. ಸಿ. ಆನಂದ್ ಸ್ವತಃ ರಂಗಭೂಮಿಯ ನಟನಾಗಿರುವುದರಿಂದ ತಮ್ಮ ಸುತ್ತಮುತ್ತಲಿನ ರಂಗಭೂಮಿಯ ಗೆಳೆಯರನ್ನು ಅನುಕೂಲತೆಯ ದೃಷ್ಟಿಯಿಂದ ತೊಡಗಿಸಿಕೊಂಡಿರುವುದು ಹೆಚ್ಚು ಸೂಕ್ತ ಅನ್ನಿಸುತ್ತದೆ.

'ಇಲ್ಲದವರು ಸಾ. ಚಿ. ನಾಗರಾಜರವರ ಕಥೆಯನ್ನು ಆಧರಿಸಿ ನಿರ್ದೇಶಿಸಿದ ಚಿತ್ರ. ಶೀರ್ಷಿಕೆಯೇ ಹೇಳುವಂತೆ ಈ ಹನ್ನೆರಡು ನಿಮಿಷಗಳ ಬಣ್ಣದ ಚಿತ್ರ ಮತ್ತೊಮ್ಮೆ ನೋಡಬೇಕೆನ್ನಿಸಿದ ಚಿತ್ರ.

ಬಡರೈತನ ಹುಡುಗನೊಬ್ಬ ಹಸಿವಿನಿಂದ ಅಥವಾ ಬ್ರೆಡ್ಡನ್ನು ತಿನ್ನುವ ಆಸೆಯಿಂದ ಬ್ರೆಡ್ಡನ್ನು ಕದಿಯುತ್ತಾನೆ. ಭಯದಿಂದ ಓಡುತ್ತಾನೆ. ಅವನೊಬ್ಬ ದೊಡ್ಡ ಕಳ್ಳ ಎನ್ನುವ ರೀತಿಯಲ್ಲಿ ನಾನಾ ರೀತಿಯಲ್ಲಿ ಅಟ್ಟಿಸಿಕೊಂಡು ಹೋಗುತ್ತಾರೆ. ಈ ರೀತಿ ಅಟ್ಟಿಸಿಕೊಂಡು ಹೋಗುವಾಗ ನಿರ್ಮಿಸಿಕೊಂಡಿರುವ ಪರಿಸರ ಚೆನ್ನಾಗಿದೆ. ಸುತ್ತಲೂ ಸಮೃದ್ಧಿಯಾಗಿರುವ ಬೆಳೆಗಳ ನಡುವೆ ಈ ಹುಡುಗ ಓಡುತ್ತಾನೆ. ತೋಳಗಳ ರೀತಿಯಲ್ಲಿ ಕೆಲವು ಮಂದಿ ಹಿಂಬಾಲಿಸುತ್ತಾರೆ. ಇದೇ ಸಮಯಕ್ಕೆ ಇಡೀ ಚಿತ್ರದುದ್ದಕ್ಕೂ ಹಿಂಸೆ ಮತ್ತು ಭಯದ ಸೂಚಕವಾಗಿ ಬಳಸಿಕೊಂಡಿರುವ ಕೆಲವು ದೇವತೆಗಳ ಚಿತ್ರಗಳಂತೂ ಒಟ್ಟು ಚಿತ್ರದ ಓಟಕ್ಕೆ ಅರ್ಥವಂತಿಕೆಯನ್ನು ತಂದುಕೊಟ್ಟಿದೆ. ಆದರೆ ಅದೇ ಹುಡುಗ ಸಿಕ್ಕಿಬಿದ್ದು ತನ್ನನ್ನು ಅಟ್ಟಿಸಿಕೊಂಡು ಬಂದ ತೋಳಗಳಿಂದ ಹಿಂಸೆಯನ್ನು ಅನುಭವಿಸಿದ ಮೇಲೆ ; ಆ ಬಡಪಾಯಿಯಿಂದ ಪ್ರತಿಭಟನೆಯನ್ನ ಬಯಸುತ್ತಾರೆ. ಇದಕ್ಕಾಗಿ ಆಂಜನೇಯ ವಿಗ್ರಹ ಬರುತ್ತದೆ. ನೋವನ್ನು ಅನುಭವಿಸಿದ ಆ ಪುಟ್ಟ ಹುಡ.ಗ ಚೂರು-ಚೂರಾಗಿದ್ದ ಬ್ರೆಡ್ಡನ್ನು ಆ ವಿಗ್ರಹದ ಮುಖಕ್ಕೆ ಬಡಿಯುತ್ತಾನೆ. ಈ ರೀತಿ ಮಾಡುವುದರಿಂದ ಇಲ್ಲಿಯ ತನಕ ಚಿತ್ರಕ್ಕೆ ಪೂರಕವಾಗಿ ಬಳಸಿಕೊಂಡಿರುವ ಹಿಂಸಾ ದೇವತೆಗಳ ಪ್ರತೀಕಗಳೆಲ್ಲ ದುರ್ಬಲವಾದಂತೆ ಗೋಚರಿಸುತ್ತದೆ. ಯಾಕೆಂದರೆ ಈ ಘಟನೆಯನ್ನು ಚಿತ್ರ ಬಯಸುವುದಿಲ್ಲ. ಈ ದೃಷ್ಟಿಯಿಂದ ವಾಸುದೇವನ್ ನಾಯರ್‌ರವರ 'ನಿರ್ಮಾಲ್ಯಂ' ಚಿತ್ರದ ಪೂಜಾರಿ ತನ್ನ ಹೆಂಡತಿ ಬೇರೊಬ್ಬನ ಜೊತೆಯಲ್ಲಿ ಮಲಗಿದಾಗ ; ಇಲ್ಲಿಯವರೆವಿಗೆ ತನ್ನ ಹೆಂಡತಿ ಮಕ್ಕಳ ಸುಖದುಃಖವನ್ನು ಮರೆತು ಪೂಜಿಸಿದ್ದ ದೇವತೆಯ ಮುಖಕ್ಕೆ ಉಗುಳುವ ಸಂದರ್ಭ ನಿಜವಾದ ಅರ್ಥಪೂರ್ಣ ಪ್ರತಿಭಟನೆಯಾಗಿರುತ್ತೆ. ಆದ್ದರಿಂದ ಇಂಥ ಸೂಕ್ಷ್ಮ ವಿಷಯಗಳೂ ಸಹ ವಾಸ್ತವತೆಯ ಜೊತೆಗೆ, ವಸ್ತುವಿನ ಬಿಗಿಗೆ ಅಗತ್ಯ ಅನ್ನಿಸುತ್ತೆ. ಒಟ್ಟಿನಲ್ಲಿ 'ಇಲ್ಲದವರು' ಒಂದು ಉತ್ತಮ ಚಿತ್ರ ಎನ್ನಲಡ್ಡಿಯಿಲ್ಲ.

— o —

" ಬೇಡದವರ ಮೇಲೆ ಬಿತ್ತು
ಬೇಡಿದವರಿಗೆ ಇಲ್ಲಿ ತುತ್ತು
ಹಸಿಯದವರು ಹಲವು ಮಂದಿ
ಹಸಿದ ಜನರು ಕೆಲವು ಮಂದಿ "

—ಮಧುರಚೆನ್ನ

# ಪುಸ್ತಕ ವಿಮರ್ಶೆ

## ‘ಬರ’ — ಕೆಲವು ಟಿಪ್ಪಣಿಗಳು.

‘ಬರ’ ಕತೆಯಲ್ಲಿ ಡಿ. ಸಿ. ಸತೀಶ್ ಹಾಗೂ ರೈತ ಸಂಘದ ಅಧ್ಯಕ್ಷ ಭೀಮೋಜಿಗೆ ನಡೆಯುವ ಈ ಸಂಭಾಷಣೆಯನ್ನು ಗಮನಿಸಿ :

> ನೀವು ನನ್ನ ಜೊತೆ ಸಹಕರಿಸ್ತಾ ಇಲ್ಲ. ಜಿಲ್ಲೆಗಾಗಿ ಮಾಸ್ ಜೊತೆ ಸಂಬಂಧ ಇಟ್ಟುಕೊಂಡಿರೋ ನಿಮ್ಮಂಥವರು ಮಾಡಬಹುದಾದ್ದು ಬಹಳ ಇದೆ :
>
> ‘ಇದೆ’ — ಆದರೆ ನಿಮ್ಮ ಮಾರ್ಗದಲ್ಲಿ ಅಲ್ಲ ಸರ್. ಬೇಜಾರು ಮಾಡಬೇಡಿ. ನನ್ನ ಮನಸ್ಸಿನಲ್ಲಿರೋದನ್ನ ಹೇಳ್ತೀನಿ. ನೀವು ಬ್ಯುರೋಕ್ರಾಟೋ ? ಕ್ರಾಂತಿ ಕಾರರೋ ? ಎರಡನ್ನೂ ಸೇರಿಸಕ್ಕೆ ಆಗತ್ತೆ ಅಂತ ನಿಮ್ಮ ಭ್ರಮೆ. ನಿಮ್ಮ ಭಾವ ಜಯನ್ ಅವರ ಭ್ರಮೆ ಕೂಡ. ನನ್ನಂಥ ಪುಢಾರಿಗೆ ಅರ್ಥವಾಗೋದು ನಿಮಗೆ ಯಾಕೆ ಆಗಲ್ಲ ? ತಕೊಳ್ಳೋ ಸಂಬಳಾನ ಜಸ್ಟಿಫೈ ಮಾಡಿಕೋಳೋಕೆ ನೀವು ಸಮ್ಮನೆ ಹಾರಾಡಿದ ಹಾಗೆ ಆಗುತ್ತೆ. ನೀವು ಯಾಕ್ಕೆ ಅಡ್ಮಿನಿಸ್ಟ್ರೇಟಿವ್ ಸರ್ವಿಸ್‌ಗೆ ಸೇರಿದಿರಿ ಹೇಳಿ ?
>
> ‘ಬರೀ ನಿಮ್ಮ ಥರದ ರಾಜಕೀಯ ಮಾಡೋದ್ರಿಂದಾನೂ ಸಮಸ್ಯೆ ಬಗೆ ಹರಿಯೊಲ್ಲ’
>
> ‘ಆದರೆ ನಾನು ಸ್ವಚ್ಛವಾದ ನಡತೆ, ಕೈತುಂಬ ಸಂಬಳ, ಕ್ರಾಂತಿಕಾರಕ ವಿಚಾರ- ಎಲ್ಲಾನೂ ಒಟ್ಟಿಗೇ ಚೌ ಚೌ ಮಾಡಲ್ಲ. ನನ್ನಂಥವರಿಂದ ನಿಂತದ್ದು ಚಲಿಸುತ್ತೆ ನನಗೂ ಒಂದು ವಿಶನ್ ಇರಬಹುದೂಂತ ನಿಮಗೆ ಯಾಕೆ ಅನಿಸಲ್ಲ ’
>
> (ಬರ ಪುಟ 23, 24)

ಸತೀಶ್ ಹಾಗೂ ಭೀಮೋಜಿಯ ಈ ಸಂಭಾಷಣೆ ಬರ ಕತೆಯ ಮುಖ್ಯ ನೆಲೆಯನ್ನು ಸೂಚಿಸುತ್ತದೆ. ಸತೀಶನಂಥ ಪಾತ್ರವನ್ನು ತಮ್ಮ ಕೃತಿಗಳ ನಾಯಕನನ್ನಾಗಿ ಮಾಡಿ

ಕೊಳ್ಳುವ ಅನಂತಮೂರ್ತಿಯವರು ಅದಕ್ಕೆ ಪರ್ಯಾಯವಾದ ಸಂಸ್ಕೃತಿಯೊಂದರಿಂದ ಬಂದ ಭೀಮೋಜಿಯಂತಹ ಪಾತ್ರವನ್ನು ಮುಖಾಮುಖಿಯಾಗಿಸುವುದರ ಮೂಲಕ ಸಮಕಾಲೀನ ಬದುಕಿಗೆ ಅನ್ವಯಿಸುವ ಕೆಲವು ಮುಖ್ಯ ಸಂಗತಿಗಳನ್ನು ಹೇಳುತ್ತಾರೆ.

ಬರ ಕತೆಯ ವಸ್ತು ಕೇವಲ ಸಾಮಾಜಿಕವಲ್ಲ; ಸಾಂಸ್ಕೃತಿಕವಾದದ್ದು. ಬರಗಾಲದ ಸನ್ನಿವೇಶದ ಮೂಲಕ ಸಾಮಾಜಿಕ-ರಾಜಕೀಯ ಸ್ಥಿತಿಯೊಂದರ ಚಿತ್ರವನ್ನು ಈ ಕತೆ ನೀಡಿದರೂ ಇದೇ ಕತೆಯ ಮುಖ್ಯ ಆಶಯವಲ್ಲ. ರಾಜಕೀಯ-ಸಾಮಾಜಿಕ ಸ್ಥಿತಿಯ ವಿಶ್ಲೇಷಣೆ ಕತೆಯ ಹಂದರವನ್ನು ರೂಪಿಸಿದರೂ ಇಡೀ ಕತೆಯಲ್ಲಿ ಒಳವಿದ್ಯುತ್ತಿನಂತೆ ಹರಿಯುವ ಕತೆಯ ಆಶಯ–ಸಾಂಸ್ಕೃತಿಕವಾದದ್ದು.

ಸತೀಶ ಸೂಕ್ಷ್ಮ ಮನಸ್ಸಿನ ವ್ಯಕ್ತಿ, ಸಂವೇದನಾಶೀಲ. ಬರಗಾಲದ ಜಿಲ್ಲೆಗೆ ಬೇಕೆಂದೇ ವರ್ಗಮಾಡಿಸಿಕೊಂಡು ಬಂದವನು. ಇಕ್ಕಟ್ಟಿನ ಸನ್ನಿವೇಶದಲ್ಲಿ, ನಿಷ್ಠುರ ವಾಸ್ತವದಲ್ಲಿ ಒಡ್ಡಿಕೊಳ್ಳುವುದರ ಮೂಲಕ ತನ್ನನ್ನು ತಾನು ಶೋಧಿಸಿಕೊಳ್ಳುವುದು ಸತೀಶನ ಉದ್ದೇಶ. ಇಂತಹ 'ಆತ್ಮಶೋಧನೆ' - ಅನಂತಮೂರ್ತಿಯವರ ಕೃತಿಗಳೆಲ್ಲದರ ಸಾಮಾನ್ಯ ಅಂಶ. ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ—ಈ ಆತ್ಮಪ್ರಜ್ಞೆ ಪಲಾಯನವಲ್ಲ, ಹೊರಜಗತ್ತನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಇದು ಅತ್ಯಗತ್ಯ ವೆಂಬ ವಿವೇಕದಿಂದ ಮಾಡಿದ ಪ್ರಯತ್ನ.

ಅನಂತಮೂರ್ತಿಯವರಿಗೆ ಸಂಸ್ಕೃತಿ ಬಹಳ ಮುಖ್ಯವಾದುದು. ವ್ಯಕ್ತಿಯ ಒಳಜಗತ್ತನ್ನು ಹೊರಜಗತ್ತಿನೊಡನೆ ಮುಖಾಮುಖಿಯಾಗಿಸಿ ಸಾಂಸ್ಕೃತಿಕ ಸಂದರ್ಭ ದಲ್ಲಿಟ್ಟು ನೋಡುವುದು ಅವರ ರೀತಿ, ಸಂಸ್ಕೃತಿ ಅವರಿಗೆ ಸಮಾಜದ ಸೂಪರ್ ಸ್ಟ್ರಕ್ಚರ್ ಮಾತ್ರವಲ್ಲ, ಟ್ರಿಲ್ಲಿಂಗ್ ಹೇಳುವಂತೆ ಬದುಕನ್ನು ನಿಯಂತ್ರಿಸುವ, ರೂಪಿಸುವ ಶಕ್ತಿ ಕೂಡ. ಹೀಗಾಗಿ ಅನಂತಮೂರ್ತಿಯವರಲ್ಲಿ ಸಾಂಸ್ಕೃತಿಕ ವಿಶ್ಲೇಷಣೆ ಸಹಜವಾಗಿ ಪ್ರಧಾನವಾಗುತ್ತದೆ.

ಬರ-ಕತೆಯಲ್ಲಿ ಅನಂತಮೂರ್ತಿಯವರು ಸತೀಶನ ಪಾತ್ರದ ಮೂಲಕ ವಸಾಹತು ಷಾಹಿ ಸಂಸ್ಕೃತಿ ನಮ್ಮ ಬದುಕಿನ ಮೇಲೆ ಬೀರುವ ಪರಿಣಾಮನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ಈ ನೆಲದಲ್ಲಿ ನಿಜವಾದ ಬೇರಿಲ್ಲದ ಇಂತಹ ಪಾತ್ರಗಳು ನಿಜ ವಾಗಲು ಪ್ರಯತ್ನಿಸಿದಷ್ಟು ಕೃತಕವಾಗಿ ಬಿಡುವ ಸಾಧ್ಯತೆಯೇ ಹೆಚ್ಚು. ಸತೀಶನ ಎಲ್ಲ ಕ್ರಿಯೆಗಳು ನೈಜತೆ ಕಳೆದುಕೊಂಡು ಸೂಕ್ಷ್ಮ ರಾಜಕಾರಣವಾಗಿ ಬಿಡುವ ಅಪಾಯವಿದೆ. ಸತೀಶ ಸಂವೇದನಾಶೀಲನಾದ್ದರಿಂದ. ಪ್ರಬುದ್ಧನಾದ್ದರಿಂದ ಈ ಸ್ಥಿತಿಯ ಅರಿವು ಆತನಿಗಿದೆ. ಆದ್ದರಿಂದಲೇ ಬರಗಾಲದ ಭೀಕರತೆಯ ದುಃಖ ತನ್ನನ್ನು ತೀವ್ರವಾಗಿ ಬಾಧಿಸುತ್ತಿಲ್ಲವೆಂಬುದು ಅವನ ದುಃಖಕ್ಕೆ ಕಾರಣವಾಗುತ್ತದೆ. ಆತನ ಸಾಚಾ ಸರಳತೆಯ

ಪ್ರಯತ್ನ ಜನರ ಕಣ್ಣಿನಲ್ಲಿ ಅವನನ್ನು ಮತ್ತಷ್ಟು ಹಿಗ್ಗಿಸುತ್ತದೆ. ಆಫೀಸರ್ ಗತ್ತು, ಆ ಗತ್ತನ್ನು ಮುಚ್ಚಿಡುವ ದ್ವಂದ್ವದಲ್ಲಿ ಆತ ನರಳುತ್ತಾನೆ. ರಾಜೀನಾಮೆ ನೀಡಬೇಕೆಂದುಕೊಂಡರೂ ನೀಡಬೇಕೆಂಬ ಗಟ್ಟಿ ನಿರ್ಧಾರವಿಲ್ಲದ ಸ್ಥಿತಿ ಆತನದು. ನಿಷ್ಠುರ ವಾಸ್ತವತೆಯ ನೆಲೆಯಲ್ಲಿ ಆತನ ಈ ಸ್ಥಿತಿ ಅರ್ಥಪೂರ್ಣವಾಗಬಲ್ಲುದು. ಆದರೆ ವಾಸ್ತವವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಷ್ಟು ಅದು ತೊಡಕಿನದಾಗುತ್ತದೆ. ಈ ವಾಸ್ತವವನ್ನು ಅರ್ಥಮಾಡಿಕೊಳ್ಳಲು ಆತನಿಗೆ ಭೀಮೋಜಿಯ ಅಗತ್ಯವಿದೆ-ಭಾರತೀಪುರದ ಜಗನ್ನಾಥನಿಗೆ ಪಿಳ್ಳನಿದ್ದಂತೆ.

ಸತೀಶನ ಮನಸ್ಸಿನ ಕಳಕಳಿ, ಈ ಕಳಕಳಿಯನ್ನು 'ಕ್ರಿಯೆ' ಯಾಗಿಸುವಲ್ಲಿ ಆತ ಎದುರಿಸುವ ಸಮಸ್ಯೆ—ಇಲ್ಲಿ ಬಹಳ ಮುಖ್ಯವಾದುದು. ಚಿಂತನೆಯಲ್ಲಿ ಆತ ನಿಜವಾಗಿ, ಕ್ರಿಯೆಯಲ್ಲಿ ಸೋಲುವ ರೀತಿಯನ್ನು ಜನ ವಿಶ್ಲೇಷಿಸುವ ಬಗೆಯನ್ನು ನೋಡಿ: 'ಸಾಚಾ ಮನುಷ್ಯ, ಆದರೆ ಎಫಿಶಿಯಂಟ್ ಅಲ್ಲ.'

ಇಲ್ಲಿ ಸತೀಶನ ಅಸಹಾಯಕತೆ ದೌರ್ಬಲ್ಯವಾಗುವ ಬದಲು ಸಂಸ್ಕೃತಿಯ ಅನಿವಾರ್ಯ ಸ್ಥಿತಿಯೆಂಬಂತೆ ಚಿತ್ರಿಸಿರುವುದರಲ್ಲಿ ಅನಂತಮೂರ್ತಿಯವರ ಯಶಸ್ಸಿದೆ.

ವಸಾಹತುಶಾಹಿ ಸಂಸ್ಕೃತಿಗೆ ಪರ್ಯಾಯವಾಗಿ ಬರುವ ಪಾತ್ರ ಭೀಮೋಜಿಯದು. ಭೀಮೋಜಿ ರೈತಸಂಘದ ಅಧ್ಯಕ್ಷ. ಮುನಿಸಿಪಲ್ ಕೆಲಸಗಾರರ ಕಾರ್ಯದರ್ಶಿ. ಹೋದ ಸಾರಿ ಚುನಾವಣೆಯಲ್ಲಿ ಎಲ್ಲರೂ ಮಾತನಾಡಿಕೊಳ್ಳುವಂತೆ ಚೀಫ್ ಮಿನಿಸ್ಟರಿಂದ ಹಣ ಪಡೆದು ರುದ್ರಪ್ಪನನ್ನು ಸೋಲಿಸಲೆಂದು ಚುನಾವಣೆಗೆ ನಿಂತ ಅಭ್ಯರ್ಥಿ. ಮೇಲಿನ ಗುಂಡಿಯನ್ನು ಕೆಳಗಿನ ಕಾಜಕ್ಕೆ ಹಾಕಿ ಇಸ್ತ್ರಿಯಿಲ್ಲದ ದೊಗಳೆ ಅಂಗಿಯನ್ನು ತೊಟ್ಟ ಈತ ಜನಗಳ ಜೊತೆ ನೇರ ಸಂಬಂಧವಿಟ್ಟುಕೊಂಡಂಥವನು; ವಾಸ್ತವದ ಅರಿವಿರುವಂಥವನು. ವ್ಯಂಗ್ಯವಾಗಿ ಮಾತನಾಡುವಾಗ ಪುಸಲಾಯಿಸುವ ಕಣ್ಣಿಂದ ನೋಡುವ, ಆದರೆ ವ್ಯಂಗ್ಯವಾಗಿ ನೋಡುವಾಗ ಪುಸಲಾಯಿಸಿ ಮಾತನಾಡುವ ಈತನಿಗೆ—ಸತೀಶನನ್ನು ಆತನ ಅಧಿಕಾರದ ಎದುರಿನಲ್ಲಿಯೇ ತಮಾಷೆ ಮಾಡುವುದು ಸಾಧ್ಯ. ಸತೀಶ ಜಿಲ್ಲಾಧಿಕಾರಿಯಾಗಿ ಅಧಿಕಾರ ವಹಿಸಿಕೊಳ್ಳಲು ಬಂದಾಗ ಎಲ್ಲರೂ ಸ್ವಾಗತದ ಸಂಭ್ರಮದಲ್ಲಿರುವಾಗ ಇಡೀ ಸಂದರ್ಭವನ್ನು ವ್ಯಂಗ್ಯವಾಗಿ ನೋಡುತ್ತಾ ನಿಲ್ಲಬಲ್ಲ ಸತ್ವವಿರುವ ಭೀಮೋಜಿ ಕ್ರಿಯಾತ್ಮಕ ವ್ಯಕ್ತಿ.

ಭೀಮೋಜಿ ಕ್ರಿಯಾತ್ಮಕ ವ್ಯಕ್ತಿ ನಿಜ; ಆದರೆ ಆತನ ಉದ್ದೇಶ ಸಿ.ಎಮ್‌ನ ಕೈ ಬಲಪಡಿಸೋದು. ಸಿ.ಎಮ್‌ನ ವಿರೋಧಿ ರುದ್ರಪ್ಪನ ಈ ಜಿಲ್ಲೆಯಲ್ಲಿ, ಆತ ರಾಜೀನಾಮೆ ನೀಡುವವರೆಗೆ ಈತ ಜನಹಿತ ಕಾರ್ಯದಲ್ಲಿಯೂ ಸಹ ಸತೀಶನಿಗೆ ನೆರವಾಗಲಾರ.

ಈ ಹಿನ್ನೆಲೆಯಲ್ಲಿ ಅನಂತಮೂರ್ತಿಯವರು ಚಿತ್ರಿಸಬಯಸುವ ಸನ್ನಿವೇಶವನ್ನು ಗಮನಿಸಿ :

ಪ್ರಾಮಾಣಿಕ ಕಳಕಳಿಯ ಸತೀಶನಿಗೆ ಜನಗಳ ಜೊತೆ ನೇರ ಸಂಬಂಧ ಸೃಷ್ಟಿಸಿಕೊಂಡು, ವಾಸ್ತವದ ನಿಷ್ಠುರದಲ್ಲಿ ತನ್ನ ಕಳಕಳಿಯನ್ನು ಕ್ರಿಯೆಯಾಗಿಸುವುದು ಸಾಧ್ಯವಿಲ್ಲ. ಮಾಸ್ ಜೊತೆ ಸಂಬಂಧವಿಟ್ಟುಕೊಂಡು ವಾಸ್ತವದಲ್ಲಿ ಗಟ್ಟಿಯಾದ ಭೀಮೋಜಿಗೆ ಬರಗಾಲದ ಪರಿಸ್ಥಿತಿಯಲ್ಲಿಯೂ ಸ್ವಾರ್ಥದ ಸಂಚು ಮುಖ್ಯವಾಗುತ್ತದೆ. ಈ ಎರಡು ಸಾಧ್ಯತೆಗಳಲ್ಲಿ ಛಿದ್ರವಾಗಿರುವ ಸಮಕಾಲೀನ ಸಂದರ್ಭದ ಚಿತ್ರಣವೇ ಬರ ಕತೆಯ ಮುಖ್ಯ ಆಶಯ. ಸತೀಶ ಈ ಇಕ್ಕಟ್ಟಿನ ಸನ್ನಿವೇಶದಲ್ಲಿ ಬೇರೆ ದಾರಿ ಕಾಣದೆ 'ಫೈರಿಂಗ್' ಗೆ ಆರ್ಡರ್ ನೀಡುವ ಅವನ ನಿರ್ಧಾರ ನಮ್ಮ ಪರಿಸ್ಥಿತಿಯ ದುರಂತ ವ್ಯಂಗ್ಯ.

ಸಂಕೀರ್ಣವಾದ ಈ ಸ್ಥಿತಿಯನ್ನು ಅನಂತಮೂರ್ತಿಯವರು ಅಗತ್ಯ ವಿವರಗಳ ಮೂಲಕ 'ಬರ' ಕತೆಯಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾರೆ. ರಾಜಕೀಯ ಸ್ಥಿತಿಯೊಂದರ ಸರಳ ವ್ಯಾಖ್ಯಾನವಾಗಿ ಬಿಡಬಹುದಾಗಿದ್ದ ಈ ವಸ್ತು ಅನಂತಮೂರ್ತಿಯವರಲ್ಲಿ ತನ್ನೆಲ್ಲ ಸೂಕ್ಷ್ಮಗಳನ್ನು ಒಳಗೊಂಡು ಅಭಿವ್ಯಕ್ತಗೊಂಡಿದೆ. ಒಂದು ಹನಿ ನೀರನ್ನು ಕೊಡದೆ ಮುದುಕಿಯ ಕಠೋರ ಹಟ, ಸುಲೇಮಾನ್‌ನ ಸೃಷ್ಟ್ಯಾತ್ಮಕತೆ ವ್ಯಾವಹಾರಿಕ ದೈನ್ಯದಲ್ಲಿ ಪರ್ಯವಸಾನವಾಗುವ ಬಗೆ, ಗತವೈಭವಾದ ಸ್ಮಾರಕಗಳ ಹಿನ್ನೆಲೆ, ಪೆಟ್ರೋಲ್ ಟ್ಯಾಂಕ್ ಕ್ಯಾಪ್ ಕದ್ದು ಅದನ್ನು ಮಾಲೀಕನಿಗೇ ಮಾರುವ ಅಂಗಡಿಯವನ ಚಿತ್ರ, ಕಾರಿನಲ್ಲಿ ಸಿಕ್ಕ ಮಕ್ಕಳ ಗೊಂದಲದ ದೃಶ್ಯ, ಸತೀಶನ ಬಂಗಲೆ, ರೇಖಾಳ ಬದುಕಿನ ರೀತಿ – ಈ ಎಲ್ಲ ವಿವರಗಳು ಅನಂತಮೂರ್ತಿಯವರ ಚಿಂತನೆಗೆ ಸೂಕ್ತ ಆಕಾರ ನೀಡಿವೆ.

'ಬರ' – ಅನಂತಮೂರ್ತಿಯವರ ಒಟ್ಟು ಸಾಹಿತ್ಯದ ಸಂದರ್ಭದಲ್ಲಿ ಬಹು ಮುಖ್ಯವಾದ ಕತೆಯಾಗಿದೆ.

—ನರಹಳ್ಳಿ ಬಾಲಸುಬ್ರಹ್ಮಣ್ಯ

# ಹಿಂದುಳಿದವರ ಹಿತರಕ್ಷಣೆ

* ಸರ್ವರಿಗೂ ಸಮಾನ ಅವಕಾಶ; ದೌರ್ಜನ್ಯಗಳಿಂದ ದಲಿತ ವರ್ಗದ ರಕ್ಷಣೆ–ಇದು ಸರ್ಕಾರದ ಗುರಿ.
* ಹರಿಜನ–ಗಿರಿಜನರ ಸಿದ್ಧಾಂತಕ್ಕಾಗಿ ನೇಮಕಗೊಂಡ ಹರಿಜನ–ಗಿರಿಜನ ಕಾರ್ಪೊರೇಷನ್ ತೀವ್ರ ಕಾರ್ಯನಿರತ.
* ಹಿಂದುಳಿದ ವರ್ಗದವರಿಗೆ ಶಿಕ್ಷಣ ಮತ್ತು ಸರ್ಕಾರಿ ಸೇವೆಯಲ್ಲಿ ಸೂಕ್ತ ಪ್ರಾತಿನಿಧ್ಯ.
* ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತ ಆಯೋಗಗಳ ರಚನೆ.
* ದಲಿತರ ಮೇಲೆ ಆಗುವ ದೌರ್ಜನ್ಯಗಳನ್ನು ತಪ್ಪಿಸಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟರಿಗೆ ಹೆಚ್ಚಿನ ಅಧಿಕಾರ.
* ಕೋಮು ಗಲಭೆಗಳನ್ನು ಹತ್ತಿಕ್ಕಿ ಸೌಹಾರ್ದತೆಯನ್ನು ಕಾಯಲು ರಾಜ್ಯ ಹಾಗೂ ತಾಲ್ಲೂಕು ಮಟ್ಟದಲ್ಲಿ ಸಮಿತಿಗಳ ರಚನೆ.

ಪ್ರಕಟಣೆ : ಕರ್ನಾಟಕ ವಾರ್ತೆ

ಓದಿ :

ನನ್ನ ಬಾಲ್ಯವನ್ನು, ನಾನು ಬೆಳೆದ ಪರಿಸರ. ಅನುಭವವನ್ನು ಸ್ವೀಕರಿಸುತ್ತ ಬಂದ ರೀತಿ ಇವುಗಳನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಯಾವುದಾದರೊಂದು ಕಲೆಯ ಮಾಧ್ಯಮವನ್ನು ನನ್ನದನ್ನಾಗಿರಿಸಿ ಕೊಂಡಿರದಿದ್ದರೆ ನಾನು ಬದುಕಿರುವುದೇ ಅಸಾಧ್ಯವಾಗಬಹುದಾಗಿತ್ತೇನೋ ಅನ್ನಿಸಿದ ಹಾಗೆ ಅನುಭವಿಸಿದ ಕ್ಷಣಗಳು ನನ್ನ ಬದುಕಿನಲ್ಲಿವೆ.

ಚಿಕ್ಕಂದಿನಲ್ಲಿ ಅತ್ಯಂತ ಆಸ್ಥೆಯಿಂದ, ಸುತ್ತಲಿನವರನ್ನು ಸಂಪೂರ್ಣವಾಗಿ ಮರೆಯುವಷ್ಟರ ಮಟ್ಟಿಗಿನ ತನ್ಮಯತೆಯಿಂದ ತೊಡಗುತ್ತಿದ್ದುದು ನೀರು-ಬಣ್ಣ ಚಿತ್ರ ಬರೆಯುವುದರಲ್ಲಾಗಿತ್ತು. ನಿಜವಾಗಿ ನೋಡಿದರೆ ಚಿತ್ರಕಲೆಯೋ ನನ್ನ ಅಭಿವ್ಯಕ್ತಿಯ ಮುಖ್ಯ ಮಾಧ್ಯಮವಾಗಬೇಕಾಗಿತ್ತು. ಆ ಕಾರಣಕ್ಕಾಗಿಯೇ ನಾನು 1946ರಲ್ಲಿ ಧಾರವಾಡವನ್ನು ಬಿಟ್ಟು ಮುಂಬಯಿಗೆ ಬಂದಿದ್ದೆ. ಗ್ರ್ಯಾಂಟ್‌ರೋಡಿನ 'ಕಲಾನಿಕೇತನ'ದ ಸಂಜೆಯ ವರ್ಗಗಳನ್ನು ಸೇರಿದ್ದೆ. ಆದರೆ ಮುಂದಿನ ಕೆಲವು ದಿನಗಳಲ್ಲೇ ಎಂ. ಎನ್. ರಾಯ್ ಅವರ ರ್‍ಯಾಡಿಕಲ್ ಡೆಮಾಕ್ರಟಿಕ್ ಪಾರ್ಟಿ (ಮುಂದೆ ಇದು 'ರ್‍ಯಾಡಿಕಲ್ ಹ್ಯುಮನಿಸ್ಟ್ ಮುವ್‌ಮೆಂಟ್' ಆಗಿ ಪರಿವರ್ತನೆಗೊಂಡಿತು) ಸೇರಿ ಆಗಿನ ಅಪ್ರಬುದ್ಧ ಉತ್ಸಾಹದಲ್ಲಿ ಕಲಾನಿಕೇತನದ ವರ್ಗಗಳನ್ನು ಬಿಟ್ಟುಬಿಟ್ಟೆ. ಜನರೆಂದರೆ ಸಂಕೋಚ ಪಡುವವರು ಚರ್ಚ್‌ಗೇಟ್ ಸ್ಟೇಷನ್ನಿನ ಹೆಬ್ಬಾಗಿಲಲ್ಲಿ ನಿಂತು ಪಾರ್ಟಿಯ ಮುಖಪತ್ರವಾದ 'ಇಂಡಿಪೆಂಡೆಂಟ್ ಇಂಡಿಯಾ' (ಈಗ 'ರಾಡಿಕಲ್ ಹ್ಯುಮನಿಸ್ಟ್') ವಾರಪತ್ರಿಕೆಯನ್ನು ಅದರ ಮಹತ್ವದ ವಿಷಯ ಸೂಚಿಯನ್ನು ಒದರಿ ಹೇಳುತ್ತ ಮಾಡುತ್ತಿದ್ದ ಸಂಗತಿಯನ್ನು ಈಗ ನೆನೆದರೆ ನನಗೆ ಆಶ್ಚರ್ಯ !"

(ಚಿತ್ತಾಲರ ಕತೆಗಳು : ಚಿತ್ತಾಲರ ಮುನ್ನುಡಿಯಿಂದ)

" ಒಂದು ಸಾಹಿತ್ಯ ಕೃತಿಯ ಸಂಕೀರ್ಣ ರಚನೆಗೆ ಕಾರಣವಾಗುವ ಹಲವು ಹತ್ತು ಸಂಗತಿಗಳಲ್ಲಿ ಕೃತಿಕಾರನ ಜೀವನದ ಎಳೆಗಳೂ ಸೇರಿರುತ್ತವೆ. ಇಷ್ಟರಿಂದಲೇ ಕೃತಿಯನ್ನು ಅವನ ಜೀವನದ ಚೌಕಟ್ಟಿಗೆ ಮಿತಗೊಳಿಸುವುದರಿಂದ ಸಾಹಿತ್ಯದ ಸಾಧ್ಯತೆಗಳನ್ನು ಅಲ್ಲಗಳೆದಂತಾಗುತ್ತದೆ. "

—ಕೆ. ವಿ. ನಾರಾಯಣ

ಓದಿ :

"ಕವಿಗೆ ನಂಬಿಕೆ ಮತ್ತು ಅಭಿವ್ಯಕ್ತಿ ಸುಲಭವಾಗಿದ್ದ ಹಳೆಯ ಕಾಲದಲ್ಲಿ ಆತನೊಬ್ಬ ಋಷಿಯಾಗಿದ್ದ, ಸಮಾಜ ಸುಧಾರಕನಾಗಿದ್ದ. ಅಷ್ಟೇಕೆ, ಕುವೆಂಪು ಅವರ ಕಾಲದಲ್ಲಿ ಕೂಡ ಹಳಬರ ಆತ್ಮವಿಶ್ವಾಸ ಇದ್ದಂತೆ ಕಂಡು ಬರುತ್ತದೆ. ಕುವೆಂಪು ಕೆಲವೇ ದಶಕಗಳ ಹಿಂದೆ ಕವಿಗಳ ಬಗ್ಗೆ ಬರೆಯುತ್ತ "ಖಡ್ಗಗಳಿಗೆಮ್ಮುಸಿರೆ ಹರಿ ವಜ್ರ ಸಾಣೆ; ನಮ್ಮ ಲೇಖನಿಗಿಂತ ಬರಸಿಡಿಲ ಕಾಣೆ" ಎಂದದ್ದು, ಅವರು ತುಂಬ ಸೀರಿಯಸ್ಸಾಗಿ ಹೇಳಿದ್ದರೂ ಈಗ ಹಾಸ್ಯ ಬರವಣಿಗೆಯಂತೆ ಕಾಣುತ್ತದೆ. ಯಾಕೆಂದರೆ ಕವಿಗಳು ಈಗ ಅದೆಲ್ಲ ಅಲ್ಲ ಎಂದು ಎಲ್ಲರಿಗೂ ಗೊತ್ತು. ನಮ್ಮ ಸಮಾಜ ವ್ಯವಸ್ಥೆ ಸಂಕೀರ್ಣಗೊಂಡಂತೆ. ಹಳೆಯ ರೀತಿಯ ನಂಬಿಕೆ ಹೊರಟು ಹೋದಂತೆ. ಕವಿಯ ಸ್ಥಾನದಲ್ಲಿ ಬದಲಾವಣೆಗಳಾಗಿವೆ. ಈವೊತ್ತು ಆತ ಹಾಡುವ, ಭಾಷಣ ಕೊಡುವ, ಸುಧಾರಿಸುವ ಹೀರೋ ಅಲ್ಲ; ನಾಯಕನಲ್ಲದ ಕವಿ ತನ್ನ ಪರಿಸರದೊಂದಿಗೆ ಹೊಸ ಸೇತುವೆಗಳನ್ನು ನಿರ್ಮಿಸಿಕೊಳ್ಳುತ್ತಾನೆ. ಇತರರೊಂದಿಗೆ ಬದುಕುವ ಅವರ ಅನುಭವಗಳಲ್ಲಿ ಪಾಲುಗೊಳ್ಳುವ ಅವರಂತೆಯೇ ಸಂಭಾಷಣೆ, ಜಗಳ, ತಮಾಷೆ, ವ್ಯಂಗ್ಯ ಎಲ್ಲಕ್ಕೆ ಭಾಷೆ ಬಳಸುವ ಅನುಭವವೆಲ್ಲ ವನ್ನು ತನ್ನ ಮನಸ್ಸಿನ ಒರೆಗೆ ಹಚ್ಚಿ ನೋಡುವ ಎಲ್ಲರಿಗಿಂತ ಹೆಚ್ಚು ಮಟ್ಟಗಳಲ್ಲಿ ನೋಡಿದರೂ ಅದನ್ನು ಎಲ್ಲರೂ ಬಲ್ಲಂಥ ಆಡುಮಾತು. ಆಸಕ್ತಿ ಕುತೂಹಲ, ಜಾಣತನದ ಮೂಲಕ ಓದುಗನಿಗೆ ಹೇಳುವ ಶಕ್ತಿ ಪಡೆದುಕೊಳ್ಳುತ್ತಾನೆ"

(ಅಕ್ಷರ ಹೊಸ ಕಾವ್ಯದಲ್ಲಿ ಲಂಕೇಶ್‌ರವರ ಮುನ್ನುಡಿಯಿಂದ)

"ಬೇಂದ್ರೆ, ಮಧುರಚೆನ್ನ, ಶರೀಫ್ ಸಾಹೇಬ — ಈ ಕುಲಕ್ಕೆ ಸೇರಿದ ಇನ್ನೊಬ್ಬ ಕವಿ, ಬ್ಲೇಕ್. ಉಳಿದವರಲ್ಲಿ ಅಲ್ಲಿ ಇಲ್ಲಿ ಕಾಣಬಹುದಾದ ರೀತಿ ಅವನ ಇಡೀ ಶೈಲಿ. ಅತಿ ಸಾಮಾನ್ಯ ಹೂವಿನಲ್ಲೂ ಆಳವಾದ ಭಾವನೆಯನ್ನು ಕಾಣುವೆನೆಂಬ ವರ್ಡ್ಸ್‌ವರ್ತ್‌ಗೆ ಬ್ಲೇಕ್ ಹೇಳುವುದು, ಇದು ಅತಿ ಸಾಮಾನ್ಯ ಹೂವೆಂದು ನೀನು ಯಾಕಾದರೂ ತಿಳಿಯುತ್ತಿ ? ಇಹಕ್ಕೂ ಪರಕ್ಕೂ, ದೇಹಕ್ಕೂ ಆತ್ಮಕ್ಕೂ, ಪ್ರಕೃತಿಗೂ ದೇವರಿಗೂ ನಡುವೆ ತರತಮದ ಭಾವ ಮುಖ್ಯವಾದ ಕ್ರೈಸ್ತ ಮನೋ ಧರ್ಮಕ್ಕೆ ಹೊರತಾದ ಕಾಣ್ಕೆ ಬ್ಲೇಕನದು. ಶೋಭೆಯಲ್ಲಿ ಕಂಪಿಸುವ ಮೂರ್ತತೆ ಅತ್ಯಂತ ಸಹಜವಾಗಿ, ನೇರವಾಗಿ, ಅಪ್ರಯತ್ನತವಾಗಿ ಈ ಬಗೆಯ ಕಾಣುವಿಕೆ ಯಿಂದಾಗಿ ಬ್ಲೇಕ್‌ಗೆ ತನ್ನ ಕಾವ್ಯದಲ್ಲಿ ಸಾಧ್ಯವಾಯಿತು. ಬೇಂದ್ರೆಯಂತೆ ಬ್ಲೇಕನಿಗೂ 'ಕವಿಮನದ ಬ್ಯಾಸರಾ ಹರಿಸಾಕ/ಹಾಡನುಡಿಸಾಕ ಹೆಚ್ಚಿಗೇನು ಬೇಕ/ ಒಂದು ಹೂತ ಹುಣಿಸಿಯಾ ಮರ ಸಾಕ'.

○ ○

ಇನ್ನು ನಮ್ಮ ಕಾಲದವನೇ ಆದ ಏಟ್ಸ್ ಬ್ಲೇಕ್‌ನಂಥವರ ಕಾಣ್ಕೆಯನ್ನೂ ನಮ್ಮಂಥವರ ಎಲ್ಲ ಸಂಶಯಗಳನ್ನೂ ಪಡೆದು ಸಂಕಟದಲ್ಲಿ ಕಾರ್ಯ ಸೃಷ್ಟಿ ಮಾಡಿದ"

(ರುಜುವಾತು : 11ರಲ್ಲಿ ಯು. ಆರ್. ಅನಂತಮೂರ್ತಿ)

L/NP/KRNU/72 No. M (2) PRB 211/73-74

ಮುಂದಿನ ಸಂಚಿಕೆಯಲ್ಲಿ :

ವೀಣಾದಾಸ್—ಎಚ್. ಎಸ್. ವೆಂಕಟೇಶಮೂರ್ತಿ—ಎಚ್. ಎಸ್. ಶಿವಪ್ರಕಾಶ್—ಬಾ. ಹ. ರಮಾಕುಮಾರಿ—ಸತ್ಯನಾರಾಯಣರಾವ್ ಅಣತಿ ವಿಶುಕುಮಾರ್—ದೊಡ್ಡಹುಲ್ಲೂರು ರುಕ್ಕೋಜಿ—ದುಂಡಿರಾಜ್—ದಿ|| ಯರ್ಮುಂಜ ರಾಮಚಂದ್ರರವರ ಕಾವ್ಯ ಕುರಿತು ಲೇಖನ—ಕನಸಿಗೊಂದು ಕಣ್ಣು—ನಮ್ಮ ರಂಗಭೂಮಿಯ ಒಂದಷ್ಟು ಅರ್ಥಪೂರ್ಣ ಪ್ರಯೋಗಗಳು, ಇತ್ಯಾದಿ



ಹೆಬ್ಬಾರರು ನಮ್ಮನ್ನು ಗೆರೆಗಳ ಮೂಲಕ ಸ್ನಾನ ಮಾಡಿಸುತ್ತಿದ್ದಾರೆ

Printed at : Shalivahan Printers, Bangalore-53 Editor & Publisher
M. SRINIVAS